ಸಂಗ್ರಾಹಕರು

**ಶ್ರೀ ಹನುಮಂತರಾವ**

ವಕೀಲ ಗೊರಬಾಳ

ಪ್ರಕಾಶಕರು

**ಶ್ರೀ ವರದೇಂದ್ರ**

ಹರಿದಾಸ ಸಾಹಿತ್ಯ ಮಂಡಲ

ಕೇಂದ್ರ ಲಿಂಗಸೂಗೂರ.



ಮುದ್ರಕರು

ಶ್ರೀ ಬ್ರಹ್ಮ ಭೂಷಣ ಪವರ್ ಪ್ರೆಸ್ ರಾಯಚೂರ



ಹರಿಃ ಓಂ.





# ಅರ್ಪಣ ಪತ್ರಿಕೆ.

ಪದ ರಾಗ ಮನದಿಚ್ಛ ತಾಳ ಆದಿ

ಮಧ್ವೇಶಾರ್ಪಣ ಮಧ್ವೇಶಾರ್ಪಣ, ಮಧ್ವೇಶಾರ್ಪಣಮಸ್ತು ।
ಶುದ್ಧ ತಾರತಮ್ಯ ಪದ್ಯ ಸುಳಾದಿಗಳ್, ಮಧ್ವೇಶಾರ್ಪಣಮಸ್ತು ॥ಪ॥
ಹರಿಯೆ ಪರಾತ್ಪರ ಸಿರಿ ತದ್ರಾಣಿಯು ಶ್ರೀಕೃಷ್ಣಾರ್ಪಣಮಸ್ತು ।
ನಿರುತ ಪ್ರವಹಸತ್ಯಂ ಜಗತತ್ವತೋ ಮಧ್ವೇಶಾರ್ಪಣಮಸ್ತು ।
ಹರಿಗೆ ಭಿನ್ನ ಪ್ರತಿಬಿಂಬರು ಜೀವರು ಶ್ರೀಕೃಷ್ಣಾರ್ಪಣಮಸ್ತು ।
ಸರುವ ಜೀವರು ಹರಿಯ ಅನುಚರರು ಮಧ್ವೇಶಾರ್ಪಣಮಸ್ತು ॥೧॥

ದೇವ ಋಷಿಯು ಪಿತೃ ಪಾ, ನರ ರೆಂಬುವೆ ಮಧ್ವೇಶಾರ್ಪಣಮಸ್ತು ।
ಏವ ಪಂಚವಿಧ ಮುಕುತಿ ಯೋಗ್ಯರ್ಗೆ ಶ್ರೀಕೃಷ್ಣಾರ್ಪಣಮಸ್ತು ॥
ಜೀವಿಗಳ್ ಬದ್ಧರು ತ್ರೈವಿಧ ರಿಬುವಡೆ, ಮಧ್ವೇಶಾರ್ಪಣಮಸ್ತು ।
ಕೇವಲ ದುಃಖಿಗಳ್ ಸಾಂಖ್ಯ ಬರಿಯುವರು ಶ್ರೀಕೃಷ್ಣಾರ್ಪಣಮಸ್ತು ॥೨॥
ನೀಚ ವೃಚ್ಚ ಭಾವಂಗತ ತರತಮ, ಮಧ್ವೇಶಾರ್ಪಣಮಸ್ತು ।
ಮೋಚಕ ಮುಕುತಿಯು ನಿಜಸುಖಾನುಭೂತಿ ಶ್ರೀಕೃಷ್ಣಾರ್ಪಣಮಸ್ತು ॥
ಸ್ವೋಚಿತ ವಿಮಲಸುಭಕ್ತಿ ಸಾಧನವೆ, ಮಧ್ವೇಶಾರ್ಪಣಮಸ್ತು ॥
ಬೋಧಿಸು ಪ್ರತ್ಯಕ್ಷಾನುಮಾನಾಗಮ, ಶ್ರೀಕೃಷ್ಣಾರ್ಪಣಮಸ್ತು ॥೩॥
ಅಖಿಳಾಮ್ನಾಯಗಳಿಂ;ವೇದ್ಯನು ಹರಿ. ಮಧ್ವೇಶಾರ್ಪಣಮಸ್ತು ॥
ಸಕಲ ಜೀವ ಜಡರಿಂ ಭಿನ್ನನು ಹರಿ ಶ್ರೀಕೃಷ್ಣಾರ್ಪಣಮಸ್ತು ।
ಪ್ರಕಟಿಸ ಭೇದವು ತರತಮ ಜೀವಿಗಳೊಳ್ ಮಧ್ವೇಶಾರ್ಪಣಮಸ್ತು ॥
ನಿಖಿಳ ಜಡಜಡ ಭೇದ ಜೀವರಿಂ ಶ್ರೀಕೃಷ್ಣಾರ್ಪಣಮಸ್ತು ॥೪॥
ಭಾರತಿ ರಮಣ ಮುಖ್ಯ ಪ್ರಾಣ ಪ್ರೇರಣೆ ಮಧ್ವೇಶಾರ್ಪಣಮಸ್ತು ॥
ಸಾರು ಪೂರ್ಣಮಾಲೆ ಮಂತ್ರ ಮಂದಿರಗೆ ಶ್ರೀಕೃಷ್ಣಾರ್ಪಣಮಸ್ತು ।
ಭೂರಿಕರುಣಿ ವರದೇಂದ್ರ ಹೃತ್ಪದ್ಮಗೆ ಮಧ್ವೇಶಾರ್ಪಣಮಸ್ತು ।
ಈರ ಪಿತನು ಸುಂದರ ವಿಠ್ಠಲನಡಿ ಶ್ರೀಕೃಷ್ಣಾರ್ಪಣಮಸ್ತು ॥೫॥








ಶ್ರೀ ಶ್ರೀ ರಾಘವೇಂದ್ರ ಸ್ವಾಮಿಗಳವರು

ಹರಿಃ ಓಂ

ಶ್ರೀ ಗುರುರಾಜೋ ವಿಜಯತೇ

# ನಮನ

ಭಾಮಿನಿ

ಶ್ರೀಮದಾಚಾರ್ಯರ ಮತಾನುಗ | ಧೀಮತಾಂವರ ರಂಘ್ರಿಕಮಲಕೆ |
ಸೋಮ ಪಾನಾರ್ಹರಿಗೆ ತಾತ್ವಿಕ ದೈವತಾ ಗಣಕೆ ||
ಹೈಮವತಿ ಷಣ್ಮಹಿಷಿಯರಪದ | ವ್ಯೋಮಕೇಶಗೆ, ವಾಯುವಾಣಿಸು |
ಕಾಮರಸ ಭವ ಲಕ್ಷ್ಮಿ ನಾರಾಯಣರಿಗಾ ನಮಿಪೆ ||೧||

ಹರಿಕಥಾಮೃತಸಾರ ಸಂಧಿ ೨೭-೧

## ಶ್ರೀವರದೇಂದ್ರರ ನಮನ

ಪದ | ನಾರಾಯಣತೇ ನಮೋನಮೋ ಎಂಬ ಪದ ದಂತೆ, ತಾಳ ಆದಿ

ಶ್ರೀವರದೇಂದ್ರಗೆ ನಮೋನಮೋ | ಕೋವಿದ ವಂದ್ಯಗೆ ನಮೋನಮೋ
ಸೇವಿಪ ಜನರ ಕೃಪಾವಲೋಕ ನದಿ | ಕಾವಕರುಣಿಗೆ ನಮೋನಮೋ ||ಪ
ದೇಶಿಕವರ್ಯಗೆ ನಮೋನಮೋ | ದೋಷ ವಿದೂರಗೆ ನಮೋನಮೋ ||
ಕಾಷಾಯಕಮಂಡುಲ ಧಾರಗೆ ನಮೊ | ಭಾಸುರ ಚರಿತಗೆ ನಮೊನಮೊ ||೧
ವಸುಧೀಂದ್ರಕರ ಸಂಜಾತನಿಗೆ | ವಸುಧಿಜವರ ಸಂಪ್ರೀತನಿಗೆ ||
ದಶದಿಶದೊಳು ವಿಖ್ಯಾತನಿಗೆ | ಪಶುಪತಿ ವಿನುತನ ದೂತನಿಗೆ ||೨||
ಮರುತ ಮತಾಂಬುಧಿ ಸೋಮನಿಗೆ | ಪರಮತ ತಿಮಿರ ತರಣೀನಿಭಗೆ ||
ವರದೇಶ ವಿಠಲನ ಸ್ಮರಿಸುತಲಿಂಗಸು | ಗುರುಸುಕ್ಷೇತ್ರ ನಿವಾಸನಿಗೆ ||೩

## ಶ್ರೀ ಹರಿದಾಸ ವರ್ಯರಿಗೆ ನಮನ

ಪದ ರಾಗ ಮೋಹನಕಲ್ಯಾಣಿ ತಾಳ ಅಟ್ಟ

ದಾಸ ವರ್ಯರಿಗೊಂದಿಪೆ | ದಾಸವರ್ಯರ ಪಾದಕ್ಕೆರಗಿ ಜನ್ಮಾಂತರದ
ದೋಷವ ಪರಿಹರಿಸಿಕೊಂಬೆ ||ಪಲ್ಲ||
ನಾರದಮುನಿ ಹರಿಯಾಜ್ಞದಿಂದಲಿ | ಪುರಂದರ ದಾಸರಾಗಿ ಜನಿಸಿದ||

ನಾರಾಯಣನ ದಿವ್ಯ ಪಾದ ಮಹಿಮೆಯ | ಮೂರು ಲೋಕ ಗಳಲ್ಲಿ ಹರಡಿಪ ||೧|| ಭಜಿಸುವ ಭಕತರ ಅಗಣಿತ ದೋಷವ | ನಿಜವಾಗಿ ಪರಿಹರಿಸುವಂಥ || ದಾ || ಸುಜನ ಪೋಷಕ ದುಷ್ಟ ಕುಜನ ಕುಠಾರ ಶ್ರೀ | ವಿಜಯ ರಾಯರ ಪಾದಕ್ಕೆರಗುವೆ ||೨|| ಕೋಪ ರಹಿತ ಭಕ್ತ ಪಾಪ ವಿದೂರಕ | ಶ್ರೀಪತಿ ಪಾದ ಕಮಲ ಭೃಂಗ ||ದಾ|| ತಾಪ ಸೋತ್ತಮ ಭವ ತಾಪ ನಿವಾರಕ | ಗೋಪಾಲ ದಾಸರಿಗೆರಗುವೆ| ಧರಿಯ ಸುರರ ವುದ್ಧರಿಸ ಲೋಸುಗದಿವ್ಯ | ಹರಿ ಕಥಾಮೃತ ಸಾರ ಗ್ರಂಥವಾ || ದಾ | ವಿರಚಿಸಿ ಅಜ್ಞಾನ ಪರಿಹರಿಸಿದಂಥ | ಹರಿಭಕ್ತಾಗ್ರಣಿ ಶ್ರೀಜಗನ್ನಾಥ ||೪|| ಧರೆಯೊಳು ಹರಿಲೀಲಾಮೃತ ವೃಷ್ಟಿ ಗರೆಯಲು | ನಾಪರಿ ಕಥೆಗಳ ರಚಿಸಿದ || ವರದೇಂದ್ರ ಮುನಿಗಳ ಪಾದಸಾರಸ ಭೃಂಗ ಪರಮ ಸುಚರಿತ ಶ್ರೀ ಪ್ರಾಣೇಶ ||೫|| ಹರಿ ಭಕ್ತಿ ಮಾರ್ಗವ ಪರಿಪರಿ ಶಿಷ್ಯರಿ| ಗರುಹಿ ಕರುಣದಿ ವುದ್ಧರಿಸಿದ|| ಪರಮತ ತಿಮಿರಕ್ಕೆ ತರಣಿ ಸ್ವರೂಪ ಶ್ರೀ | ಗುರು ಪ್ರಾಣೇಶಾರ್ಯರಿಗೆರಗೂವೆ ||೬|| ಗುರುಪಾದ ಸೇವೆಯಾ ಪರಿಪರಿಗೈದು ಈ | ಧರೆಯೊಳು ಧನ್ಯರೆಂದೆನಿಸಿದಾ || ಹರಿದಾಸ ಕುಲರತ್ನ ಸರುವ ಸದ್ಗುಣ ಪೂರ್ಣ | ವರಶ್ರೀಪ್ರಾಣೇಶದಾಸಾರ್ಯ ||೭|| ಗುರು ಪ್ರಾಣೇಶಕರ ಸರಸಿಜ ಸಂಜಾತ | ಪರಮ ಭಾಗವತ ರೆನಿಸುವ || ದಾ || ಮರುತ ಮತದ ತತ್ವ ವರಿದಂಥ ಸುಖದ ಸುಂ| ದರ ವಿಠಲ ಮೋದ ವಿಠಲರೆಂಬ ||೮|| ದೇಶ ದೇಶದ ದ್ವಿಜರಿಗನ್ನ ಗೋದಾನವ | ಲೇಸಾಗಿಯಿತ್ತು ತತ್ವ ಜ್ಞಾನ || ಶ್ರೀಶ ಪ್ರಾಣೇಶ ವಿಠ್ಠಲರಿಂಪಡೆದ ಗುರು | ಶ್ರೀಶಪ್ರಾಣೇಶ ವಿಠಲರೆಂಬ ||೯|| ಗುರು ರಾಘವೇಂದ್ರರ ನಿರುತ ಕರುಣ ಪ್ರಾಪ್ತ ಸಿರಿ ಗೋಪಾಲಾಖ್ಯರಿಂ ಸುಜ್ಞಾನ || ಕರುಣಿಸ್ಯನೇಕ ಶಿಷ್ಯರ ನುದ್ಧರಿಸಿದ | ಗುರು ಜಗನ್ನಾಥ ವಿಠ್ಠಲದಾಸಾ ||೧೦|| ಭೂಮಿಯೊಳು ವರದೇಶ ವಿಠ್ಠಲನ ನಿಜ ಭಕ್ತ | ಸ್ತೋಮಕ್ಕೆ ಶಿರಬಾಗಿ ನಮಿಸುವೆ| ಆಮಹತ್ಮರ ಪದರಜದೊಳೆನ್ನನು ದೇವ| ನೇಮದಿಂದಲಿಪೊರಳಾಡಿಸೊ ||೧೧||

ಶ್ರೀಗುರು ಮಧ್ವೇಶ ಕೃಷ್ಣಾರ್ಪಣಮಸ್ತು

ಶ್ರೀ ಗುರುರಾಜೋ ವಿಜಯತೇ

# ಪ್ರಕಾಶಕರ ಪ್ರಾರ್ಥನೆ.

" ಸರ್ವ ದೇಶೇಷು. ಕಾಲೇಷು ನಹಿಕಃ ಪರಮೇಶ್ವರ:
ತಚ್ಛಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ ||೧|| "
"ಬೇಡುವರೋ ಸುಖ ಬೇಡಾರೋ ಕಷ್ಟವ ಮಾಡರೊ ಅದರ ಉಪಾಯವ"

ಎಂಬುವ ಶ್ರೀ ಪ್ರಾಣೇಶ ವಿಠ್ಠಲ ದಾಸಾರ್ಯರ ವಚನದಂತೆ, ಎಲ್ಲ ಜೀವಿಗಳು ಸುಖವನ್ನು ಮಾತ್ರ ಅಪೇಕ್ಷಿಸುವರು ಆದರೆ ಸುಖಕ್ಕೆ ಕಾರಣವಾದ ಉಪಾಯವನ್ನು ಮಾಡರು. ಇದು ಸಂಸಾರ ಬಂಧನಕ್ಕೊಳಗಾದ ಸರ್ವ ಜೀವರಯುಕ್ತಿ.

ನಾನುಯಾರು ಎಲ್ಲಿಂದ ಬಂದೆ ಹೇಗೆ ಬಂದೆ ಹುಟ್ಟಿಸಿದವನಾರು ? ನನ್ನ ನಡೆಯೇನು ನುಡಿ ಯೇನು ಸಾಧನವೇನು ? ನಿಜವಾಗಿ ಮಾಡುವ ಕಾರ್ಯವಾವುದು ! ಎಲ್ಲಿಗೆ ಪೋಗುವೆನೆಂಬ ವಿಚಾರವು ಪ್ರತಿಯೊಬ್ಬ ಸಚ್ಚೇತನ ಪ್ರಾಣಿಯು ಮಾಡುವದಾಗಿದ್ದು ಅವರವರ ನಿಜ ಸ್ವರೂಪದಿಂ ಪೂರಟ, ಸ್ವಾಪರೋಚ್ಛಾಪ ರೂಪವಾದ " ಅನಾದಿಕರ್ಮ " ಆ ಕರ್ಮ ಪ್ರವರ್ತಕ ಈಶ್ವರೇಚ್ಛೆಯಿಂದ ಬದ್ಧಿತರಾಗಿರುವರಿಗೆ ಈ ವಿಚಾರವೇ ತೋಚದು
ಗೇಣುದರ ಪೋಷಣೆಗಾಗಿ ಮೋಸ ಮಾಡಿ ಬಡ ಜೀವಿಗಳ ಅಸುವನ್ನು ಹೀರಿ ಕಾಸು ಸಂಪಾದಿಸಿ ವಿಷಯಾಸೆ ಬಲಿಸಿ ಹೆಂಡರು ಮಕ್ಕಳು ವುಂಡುಟ್ಟು, ಯಮ ದಂಡನೆಗೆ ಅಂಜದೆ ಅಜರಾಮರಣರಾಗಿ, ಸುಖದಲ್ಲಿಪ್ಪೆಗೆಂಬ ಭಾವನೆಯು, ನಮ್ಮಂಥ ನರ ಪಶುಗಳ ಜನ್ಮವು

ಮತ್ಕುಣ ಮಶಕ ಜನುಮ ಗಳಿಗಿಂತಲೂ ಹೀನ ವಾದುದು. ಈಜಡ ದೇಹ ನಾನಲ್ಲ; ನನ್ನದಲ್ಲ ಸತಿ ಸುತರು ನನ್ನವರಲ್ಲ ಯಾರೂ ಸಂಗಡ ಬರುವರಿಲ್ಲೆಂಬುದು, ನೋಡಿ ಕೇಳುವ ಅನುಭವವೆ ಹೊರ್ತಾಗಿ ದಾರಢ್ಯ ವಾದ ನಿಜ ತಾರತಮ್ಯ ಭೇದ ಜ್ಞಾನವಿಲ್ಲ.

" ಈಶ್ವರ: ಪ್ರಕೃತಿರ್ಜೀವೋ ಜಡಂಚೇತಿ ಚತುಷ್ಟಯಂ ।
ಪದಾರ್ಥಾನಾಂ ಸಮುದ್ದಿಷ್ಟಂ ಅತ್ರೇಶೋ ವಿಷ್ಣುರುಚ್ಯತ ।

ಇತಿ ಬ್ರಹ್ಮತರ್ಕೆ

ಈಶ್ವರ, ಚಿತ್ಪ್ರಕೃತಿ – ರಮಾ, ಜೀವರು; ಜಡಪ್ರಕೃತಿ ಯೆಂದು ನಾಲ್ಕು ವಸ್ತುಗಳು. ಈಶ್ವರನಾದ ಶ್ರೀ ಹರಿಯು ಸರ್ವ ತಂತ್ರ ಸ್ವತಂತ್ರ ರಮಾದೇವಿ ನಿತ್ಯಮುಕ್ತಳು, ಶ್ರೀಹರಿಗೆ ಆಧೀನಳು ಈಶಕೋಟಿ ಪ್ರವಿಷ್ಟಳು, ದು:ಖಾಸ್ಪ್ರಷ್ಟಳು, ಸಮಸ್ತ ಜೀವ ಜಡ ಗಳಿಗೆ ಮುಖ್ಯಾಭಿಮಾನಿಯು, ಜೀವರು ಅಲ್ಪಜ್ಞರು, ಅಸ್ವತಂತ್ರರೂ, ತ್ರಿವಿಧವಾಗಿಪ್ಪರು, ಅನಾದಿಯಿಂದ ಸ್ವಭಾವಿಕವಾಗಿ, ಸತ್ವ, ರಜೋ ತಮೋ, ಸ್ವಭಾವ ವುಳ್ಳವರು, ಜಡವು ವೇದ, ದೇಶ, ಕಾಲ, ಜಡ ಪ್ರಕೃತಿ ಯೆಂಧು ನಾಲ್ಕು ವಿಧವಾಗಿರುವದು.

ಕೈ ಬೆರಳು ಗಳು ಒಂದೊಂದಕ್ಕೊಂದು ಸಮವಾಗಿರದೆ ತರತಮ ಭಾವದಿಂದ ಹೆಚ್ಚು ಕಡಿಮೆ ಯಾಗಿರುವಂತೆ (೧) ಜೀವೇಶ ಭೇದ (೨) ಜೀವ ಜೀವರಿಗೆ ಭೇದ (೩) ಜೀವ ಜಡಗಳಿಗೆ ಭೇದ (೪) ಜಡ ಜಡ ಗಳಿಗೆ ಭೇದ (೫) ಹೀಗೆ ಪ್ರಾಮುಖ್ಯವಾಗಿ ಐದು ವಿಧ ಭೇದ ವಿದ್ದರೂ, ಅವಾಂತರ ಭೇದಗಳು ಅನಂತ ವಿರುವವು ಸುಖ ದು:ಖ ಅನುಭವ ಜೀವರಲ್ಲಿ ತಾರತಮ್ಯವೂ ಭೇದವೂ ವುಂಟು ಸುಖ ದು:ಖಾನುಭವ ವಿಲ್ಲದ ಜಡ ಜಡಗಳಲ್ಲಿ ತಾರತಮ್ಯ ವಿಲ್ಲದೇ ಪರಸ್ಪರ ಭೇದ ಮಾತ್ರ ವುಂಟು.

ಜೀವರು ಗಳಲ್ಲಿ ಪಂಚ ಭೇದ ತಾರತಮ್ಯವು ಅನಾದಿ ನಿತ್ಯವಾಗಿರು

ವದು. ನಾಂಪರಲ್ಲಿ (೧) ಅಂಶ (೨) ಆನಂದ (೩) ಬಲ (೪) ಜ್ಞಾನ (೫) ದೇಶ (೬) ಕಾಲ (೭) ಅಪರೋಕ್ಷ (೮) ಲಯ (೯) ಸೃಷ್ಟಿ (೧೦) ಪದ (೧೧) ಆವೇಶ (೧೨) ಗುಣ (೧೩) ಲಕ್ಷಣ (೧೪) ಕಾಂತಿ. ಈ ಪ್ರಕಾರ ೧೪ ವಿಧ ತಾರತಮ್ಯ ಇರುವದೆಂದು ಪ್ರಕಾಶ ಸಂಹಿತೆ ಯಲ್ಲಿ ಹೇಳಿದಂತೆ ಶ್ರೀಪಾದ ರಾಯರು ಇದರ ವಿವರಣೆ ಮಾಡಿರುವರು. "ಮಾನವ ಜನುಮ ದೊಡ್ಡದು ಹಾನಿ ಮಾಡ ಬ್ಯಾಡಿ ಹುಚ್ಚಪ್ಪ ಗಳಿರ್ಯಾ" ಪುರಂದರ ದಾಸರ ವಚನದಂತೆ ತನ್ನಿಂದೊಂದೆರಡು ಜ್ಞಾನ ಗುಣಾಧಿಕಾರಿಗಳಾದ ತಾರತಮ್ಯ ವರಿತ ಜ್ಞಾನಿಗಳಿಂದ ಹರಿ ದಾಸ್ಯ ಭಾವವನ್ನು ತಿಳಿದು ಕಿರಿಯರಿಗೆ ಹೇಳುತ್ತ ಹರಿದಾಸ ಸಾಹಿತ್ಯ ಪ್ರಚಾರ ಮಾಡುತ್ತ ಸಾಧನದ ಬಗೆ ತಿಳಿದು, ಶಮ ದಮಾದಿಗಳು ಸಂಪಾದಿಸಿ, ಶ್ರೀ ಹರಿಯೇ ಸರ್ವೋತ್ತಮ. ರಮಾ ಬ್ರಹ್ಮಾದಿಗಳು ಆತನ ಭೃತ್ಯರು ಸೇವಕರು. ದಾಸರೆಂದು ನಿತ್ಯ ಭಜಿಸಬೇಕು.

ಲೋಕದಲ್ಲಿ ಉಪಜೀವನ ಮಾಡ ಕೆಲಸ ಸಂಪಾದನೆಗೆ ತಕ್ಕ ವಿದ್ಯಾಭ್ಯಾಸ ಮಾಡಿ, ಅಧಿಕಾರಿಗಳ ತತ್ಸೇವಕರ ಮರ್ಜಿ ಸಂಪಾದನೆ ಮಾಡಿದಂತೆ, ಪರಮಾರ್ಥಿಕವಾಗಿ ಮೋಕ್ಷ ಸಾಧನೆ ಗೋಸುಗ ಶ್ರೀಹರಿಯ ಅನುಚರರಲ್ಲಿ ಭಕ್ತರಾಗಿ ಅವರನ್ನು ಭಜಿಸಿದರೆ ಜೀವೋತ್ತಮರಾದ ವಾಯು ದೇವರು ತುಷ್ಟರಾಗಿ, ಶ್ರೀ ಹರಿ ಯಿಂದ ಮೋಕ್ಷಾನಂದ ಪದವಿಯನ್ನು ಕೊಡಿಸುವರು.

ಶ್ರೀ ಹರಿಯ ಸ್ವಾತಂತ್ರ್ಯ ಸಾಮ್ರಾಜ್ಯ ಕರ್ಮಭೂಮಿಯಾದ ಭಾರತ ದೇಶವು ಐಹಿಕ ಪಾರತ್ರಿಕ ಸುಖ ಸಂಪತ್ತಿಗೆ ಹಿಂದೆ ಮೇಲಾಗಿತ್ತು. ಇಂದು ಶ್ರೀ ಹರಿಯ ಸರ್ವ ಸ್ವಾತಂತ್ರ್ಯವನ್ನು ಮರೆದು. ಅಹಂಕರ್ತೃಗಳೆನ್ನುವ ಪರರ ಅಧೀನರಾಗಿ ಹೊಟ್ಟೆಗೂ ಬಟ್ಟೆಗೂ ಸಹ ನರಳುತ್ತಿರುವೆವು. ಏಕೆ ಕಾಮ ಕ್ರೋಧಾದಿಗಳನ್ನುವ ಕಲಹ ವನ್ನು ಬಿಟ್ಟು ಜಾತಿ. ನೀತಿ, ಧರ್ಮ ಆಚಾರಗಳೆಂಬ ತರತಮ

ವರಿತ ವಿರಕ್ತಿ ಭಕ್ತಿಯಿಂ ಶ್ರೀಮಂಗಳಕರವಾದ ಸ್ವಾತಂತ್ರ್ಯ ರೂಪ ಸ್ವಾರಾಜ್ಯ ದೇಳಿಗೆಗೆ, ನಡುಕಟ್ಟಿ ಸಾಧನವಮಾಡಿರಿ. ಯಿದೇ ಪರರ ದಾಸ್ಯ ನಿವೃತ್ತಿಗೆ ಸುಲಭೋಪಾಯ ಹರಿದಾಸ್ಯ ಭಾವ ವೊಹಿಸಿ ಆತನ ಸ್ವಾತಂತ್ರ್ಯ ಸಾಮ್ರಾಜ್ಯ ಸುಖದಲ್ಲಿಲೋಲಾಡಿರಿ.

ತರತಮ ಭಾವ ವರಿತು ಸಾಧನ ಮಾಡುವ, ಜೀವಿಗಳ ವುದ್ಧಾರ ಗೋಸುಗ ಅನಾದಿ ಯಿಂದ ಅಪೌರುಷೇಯವಾದ ವೇದವು " ಸತ್ಯಂಭಿದಾ ಸತ್ಯಂಭಿದಾ ವ್ಯೈವಾರವಣ್ಯೋ ವ್ಯೈವಾರವಣೋ " ಯೆಂದು ಪೊಗಳುವ ಪೈಂಗಿ ಶ್ರುತಿಯಲ್ಲದೆ " ಸತ್ಯಂವದ ಧರ್ಮಂಚರ ಅಹರಹ ಸಂಧ್ಯಾ ಮುಪಾಸೀತ್. ನಭೃಶಂವದೇತ, ನಆತ್ಮಾನಂವಿಸೃ ಜೇತ್, " ಎನ್ನುವಅನೇಕ ವೇದಗಳು ಹೊಗಳುವವು. ಶ್ರೀ ಹರಿ ರೂಪಿಯಾದ ಬಾದರಾಯಣ ದೇವರು ದೇಶ ಕಾಲಾನುಗುಣ್ಯ ಯುಗಾನುಸಾರ ಜೀವರುಗಳ ಅಧಿಕಾರಾನುಸಾರವಾಗಿ ಅಪೌರುಷೇಯ ವೇದಗಳ ವಿಭಾಗವನ್ನು, ಮಾಡಿದರು. ಮೂಲ ರಾಮಾಯಣ ಪಂಚಾ ರಾತ್ರಾಗಮ ಇತಿಹಾಸ ಪುರಾಣಾದಿಗಳನ್ನು ರಚಿಸಿರುವರಲ್ಲದೆ ಭೇದ ನಿರ್ಣಾಯಕ (ಶಟ್ಳ) ಬ್ರಹ್ಮ ಸೂತ್ರಗಳನ್ನು ರಚಿಸಿದರು ಒಟ್ಟು ನಾಲ್ಕು ಅಬ್ಜ ಮೂವತ್ತು ಕೋಟಿ ಗ್ರಂಥಗಳನ್ನು ರಚಿಸಿರುವರೆಂದು ಶ್ರೀವಿಜಯ ದಾಸರವಚನ

ಆದಿಸೃಷ್ಟಿಯಲ್ಲಿಯೇ ಓಂಕಾರದಿಂದ ಸಕಲ ವರ್ಣಗಳ ಅಭಿವ್ಯಕ್ತಿ ಸರ್ವ ಭಾಷೆಯ ಅಭಿವ್ಯಂಜಕ ಶಕ್ತಿ ಯಿತ್ತಂತೆ, ಪ್ರಾಚುರ್ಯ ಅಪ್ರಾಚುರ್ಯ ವಾಗಿ ಯೆಲ್ಲ ಪ್ರಾಕೃತ ಭಾಷೆಗಳು ಇದ್ದ ವೆಂದು ಭಾರತ ಭಾಗವತ ಯಿತರ ಗ್ರಂಥ ಗಳಿಂದ ತಿಳಿದು ಬರುತ್ತದೆ ಕಲಿಯುಗವು ಪ್ರಾಪ್ತವಾಗಲು ಅಧರ್ಮಪೆಚ್ಚಿ ಅನೇಕ ಮತಗಳು ಪ್ರಚುರ ವಾಗಿ ವ್ಯಾಸರ ನಿಜ ಭಾವ ವನ್ನು ತಿಳಿಯದೆ, ಅನೇಕ ಭಾಷ್ಯ ಗಳನ್ನು ರಚಿಸಿ ವ್ಯಾಸಕೂಟಸ್ಥರೆಂದೆನಿಸಿಕೊಂಡಾಗ್ಯೂದರೂ

ಶ್ರೀ ವೇದವ್ಯಾಸರ ನಿಜ ಭಾವ ವನ್ನರಿತ ವಾಯುದೇವರು ಅವತರಿಸಿ ಮಧ್ವಾಭಿಧಾನದಿಂದ ನೈಜವಾದ ಭೇದ ತರತಮ ದಾಸ್ಯವನ್ನು ಸ್ಥಿರ ಗೊಳಿಸಿದ ದಾಸಾಗ್ರಣಿಯಾದ ಮುಖ್ಯ ಪ್ರಾಣನುದಾಸ ಕೂಟಸ್ಥ ನೆಂಬ ಶ್ರೀಪುರಂದರ ದಾಸರ ವಚನ, ಹಿಂದಿನಂತೆ ಕಲಿಯುಗದಲ್ಲಿ ಶ್ರೀಮದಾಚಾರ್ಯರಿಂದ ಬಂದ ಪರಂಪರೆಯು, ಅವರ ಶಿಷ್ಯರು ನರಹರಿ ತೀರ್ಥ ರಾರಂಭಿಸಿ, ಅದ್ವರು, ಶ್ರೀಪಾದರಾಯರು, ವ್ಯಾಸ ರಾಜರು ವಾದಿರಾಜರು, ಶ್ರೀಪುರಂದರ ವಿಜಯದಾಸಾದಿ ಪ್ರಭೃತಿಗಳ ನೇಕರು, ವೇದೋಪನಿಷತ್ ಅರ್ಥಗಳನ್ನು. ಕನ್ನಡದಲ್ಲಿ ಪದ ಸುಳಾದಿ ಉಗಾಭೋಗ, ತಾಯಿ, ತ್ರಿಪ್ದಿ- ಅನೇಕ ಹೊಸದಾದ ಛಂದಸ್ಸಿನಲ್ಲಿ ಲಕ್ಷಾವಧಿ ಸಂಖ್ಯೆಯಿಂದ ರಚಿಸಿ, ದೇಶೋದ್ಧಾರಕ್ಕೆ ಕಾರಣರಾಗಿ ಭಾಷೆಯ ಸೇವೆಯನ್ನು ಮಾಡಿದ ಪುಣ್ಯಾತ್ಮರು. ಇವುಗಳ ವಿಮರ್ಶೆ ಹಿಂದಿನಿಂದ ಮಾಡುವೆವು.

ಈ ನಾಲ್ಕಾರು ಶತಮಾನ ಗಳಲ್ಲಿಯೇ ಈ ಕೃತಿಗಳೆಲ್ಲ ಲೋಪವಾಗಿ ಕೆಲವು ಪುಸ್ತಕಗಳು ಗೆಲ್ಲೆಗೆ ಹತ್ತಿಹೋಗಿವೆ: ಇಂಥ ಪರಿಸ್ಥಿತಿಯಲ್ಲಿ ಶ್ರೀಹರಿ ವಾಯುಗಳು ಕಶ್ಚಿದ್ ಭಕ್ತನನ್ನು ಪ್ರೇರಿಸಿ ೫॥ ಸಾವಿರ ಪದಗಳು, ಒಂದು ಸಾವಿರ ಸುಳಾದಿ ಏಳೆಂಟು ನೂರು ಉಗಾಭೋಗ ಗಳನ್ನು ಇತರ ಗದ್ಯ ಪದ್ಯ ಗ್ರಂಥ ಗಳನ್ನು ಶೇಖ ರಿಸುವ ಕಾರ್ಯವನ್ನು ನಡೆಯಿಸಿರುವರು.

ಅವುಗಳನ್ನೆಲ್ಲ ಶ್ರೀಸೂತ್ರಕಾರರು ಭಾಷ್ಯಕಾರರ ಅನುಸರಿಸಿ ಸಾಧನ ಮಾಡುವ ಭಕ್ತರಿಗೋಸುಗ.

೧ ತಾರತಮ್ಯ ೨ ಸೃಷ್ಟಿ ೩ ಪ್ರಮೇಯ (ಶಾಸ್ತ್ರವಿಚಾರ) ೪ ಕ್ಷೇತ್ರ ಮಹಿಮಾ, ೫ ಸಾಧನ, ೬ ಉಪಾಸನಾ, ೭ ಪ್ರಾರ್ಥನಾ ೮ ಸ್ತೋತ್ರ ಭಾಗ; ಗಳೆಂದು ಪ್ರಾಮುಖ್ಯವಾಗಿ ೮ ಭಾಗ ಮಾಡಿದೆ; ಮತ್ತು ಒಂದೊಂದು

ಭಾಗದಲ್ಲಿ ಯಥಾನುಚಿತವಾಗಿ ಅನೇಕ ವಿಭಾಗ ಗಳನ್ನು ಕಲ್ಪಿಸಲಾಗಿದೆ ಮತ್ತು ಐತಿಹಾಸಿಕ ಚರಿತ್ರೆ ಮಾಡಿವಾ ದೃಷ್ಟಿ ಯಿಂದಲೂ. ಎಲ್ಲ ಸಂತರಾದ ಸ್ವಾಮಿಗಳವರು ಮತ್ತು ದಾಸಾರ್ಯರ ಮಹಿಮೆ ಗಳೆಲ್ಲ ಒತ್ತಟ್ಟಿಗೆ ಸೇರಿಸಲಾಗಿದೆ;

ಶ್ರೀ ಮಹೇಂದ್ರ ಹರಿದಾಸ ಸಾಹಿತ್ಯ ಮಂಡಲ ದಿಂದ ಮೊದಲಿಗೆ ಶ್ರೀಹರಿದಾಸ ವರ್ಗಕ್ಕೆ ಮೂಲ ಪುರುಷರಾದ ಶ್ರೀಪುರಂದರ ದಾಸರ ಮಹಿಮೆ ಸ್ತೋತ್ರ ಗಳೆಲ್ಲ ಒಗ್ಗೂಡಿಸಿ, ಮತ್ತು ಶ್ರೀಹರಿ ದಾಸರ ಪರಂಪರೆ ಹೀಗೆ ಪ್ರಕಾಶಿಸಲಾಗಿದೆ.

ಪ್ರಸ್ತುತ ದೊರೆತ ಎಲ್ಲ ತಾರತಮ್ಯ ಭಾಗ ಪದ, ಸುಳಾದಿ ಗಳನ್ನು ಅರಿತವರಿಂದ ಕ್ರಮವಾಗಿ ಕೂಡಿಸಿ ಮೂಲ ಮಾತ್ರಕ್ಕೆ ಪ್ರಚಾರ ಮಾಡಿದೆ.

ಸರ್ವೋತ್ತಮ ನಾರೆಂದು ತಿಳಿಯಲು ತಾರತಮ್ಯ ವನ್ನು ಅರಿಯುವದು ಮುಖ್ಯವಾದುದು

ಈ ತಾರತಮ್ಯ ಭಾಗ ಪ್ರಕಟಿಸಲು ಆಜ್ಞೆಯನಿತ್ತು ಉತ್ತಮವಾಗಿಯೂ, ಶಾಸ್ತ್ರ ಸಮ್ಮತವಾಗಿಯೂ, ಸರಳ ಕನ್ನಡ ಭಾಷೆ ಯಲ್ಲಿ "ಉಪೋದ್ಘಾತ" ಬರೆದು ಕಳುಹಿದ ಕನ್ನಡ ದೇಶಕ್ಕೆ ಬ್ರಹ್ಮ ಮೀಮಾಂಸಾ ಶಾಸ್ತ್ರ ಬೀರಿದ, ವಾಯು ಆಚಾರ್ಯರ ಪರ ರೆನಿಸಿದ ಶ್ರೀ ಸತ್ಯ ಪರಾಕ್ರಮ ತೀರ್ಥರ ಸದ್ವಂಶಜರೂ, ದಾಸ ಸಂಪ್ರದಾಯ ವನ್ನರಿತು ಶ್ರೀ ವಿಜಯದಾಸರ ಅನುಗ್ರಹಕ್ಕೆ ಪಾತ್ರರಾದ ಶ್ರೀಮತ್ಪೂಜ್ಯ ಶ್ರೀ ವಾಯಿ ಕೃಷ್ಣಾಚಾರ್ಯರಿಗೆ ಮಂಡಲವು ಚಿರ ಋಣಿ ಯಾಗಿದೆ,

ಪ್ರೆಸ್, ಕಾಪಿಯನ್ನು ಬರೆದ ಮ. ರಾ. ಗುರುರಾಜ ರಾವ ಬಿಜ್ಜೂರ ಇವರಿಗೆ ಶ್ರೀ ಹರಿಯು ಭಕ್ತ್ಯತಿಶಯ ವನ್ನು ಕೊಡಲಿ

ಪ್ರೆಸ್, ಕಾಪಿಯನ್ನು ಸಮಾಖ್ಯ ಮಾಡಿ; ಹಲವು ಕಠಿಣ

ಶಬ್ದಾರ್ಥವನ್ನು ಬರೆದು ಪ್ರೂಫಗಳ ತಿದ್ದಿಕೊಟ್ಟ ವೇ. ಹನುಮಂತಾಚಾರ್ಯ ಜೋಶಿ ಹುನಗುಂದ ನಮ್ಮ ಮಂಡಲದ ಕಾರ್ಯದರ್ಶಿಗಳಿದ್ದು ಈ ಮಹತ್ ಸೇವೆಗೆ ಮಂಡಲವು ಉಪಕಾರ ಸ್ಮರಿಸಿ ಪ್ರೇಮ ವಂದನೆಗಳನ್ನರ್ಪಿಸುತ್ತದೆ;

ತ್ವರೆಯಾಗಿ ಅಚ್ಚು ಮಾಡಿಕೊಟ್ಟ ರಾಯಚೂರ ಶ್ರೀ ಬ್ರಹ್ಮ ಭೂಷಣ ಪ್ರೆಸ್, ಮಾಲಕರಾದ ವೈದ್ಯ ಸುಂದರಪ್ಪನಾದ ಪಾಂಡೆ ಇವರ ಆಭಾರ ಮನ್ನಿಸುತ್ತದೆ.

" ತಂಡುಲ: ಪ್ರಸ್ಥ ಮೂಲ: " ಎನ್ನುವಂತೆ ಈ ಪುಸ್ತಕ ಅಚ್ಚು ಆಗಲಿಕ್ಕೆ ಪ್ರಥಮ ೧೨೦ ರೂಪಾಯಿ ಧನ ಸಹಾಯ ಮಾಡಿದ ಶ್ರೀಮಾನ್ ದೇಶಭೂಷಣ ಆರ್. ಕೆ. ಪ್ರಸನ್ನ ವೆಂಕಟರಾಯರು ವಿಜಾಪುರವಾಸ ಶ್ರೀರಂಗಮಾ ಮತ್ತು ಇತರರು, ರಾಯಚೂರು ನಿವಾಸಿಗಳಾದ ಧನ ಸಹಾಯ ಮಾಡಿದ ಸಕಲ ಸಜ್ಜನರಿಗೂ, ಮತ್ತು ತಾವು ಆಶ್ರಯದಾತರಾಗಿ ಇತರ ಮಿತ್ರಮಂಡಲಿಯಿಂದ ಧನ ಸಹಾಯವನ್ನು ಮಾಡಿಸಿಕೊಟ್ಟ ಶ್ರೀ. ವೆಂಕಟಾಚಾರ್ಯ ವಕೀಲ ರಾಯಚೂರ ಇವರನ್ನು ಅಭಿನಂದಿಸುತ್ತೇವೆ.

ಮುಂದೆ, ಈ ತಾರತಮ್ಯ ಭಾಗಕ್ಕೆ ಪುಷ್ಟೀಕರಿಸುವ ಸೃಷ್ಟಿ ಭಾಗ ಸುಳಾದಿಗಳನ್ನು ಪ್ರಕಟಿಸಲಾಗುವದು.

ಪ್ರಕಾಶಕರು,

ಮಂಡಲ ಅಧ್ಯಕ್ಷ.
**ದಾಸರ ಕೃಷ್ಣರಾವ ವಕೀಲ**
ಲಿಂಗಸೂಗೂರ

ಉಪಾಧ್ಯಕ್ಷ,
**ಹನುಮಂತರಾವ ವಕೀಲ**
ಗೋರೆಬಾಳ ಲಿಂಗಸೂಗೂರ

# ತಾರತಮ್ಯ ಪಂಚ ಭೇದಕ್ಕೆ ಮೂಲಾಧಾರ ವಾದ ವೇದ ಉಪನಿಷದಗಳ ಪ್ರಮಾಣಗಳು

೧ ಸತ್ಯಂಭಿದಾ ಸತ್ಯಂಭಿದಾ ಸ್ತ್ಯೆಂಗಿ ಶ್ರುತಿ.

೨ ದ್ವಾಸು ಪರ್ಣಾಸಯುಜಾ ಸಖಾಯಾ ಋಗ್ವೇದ

೩ ಸಮಾನೇ ವೃಕ್ಷೇ ಪುರುಷೋ ನಿಮಗ್ನೋ ಋಗ್ವೇದ
ಶ್ವೇತಾಶ್ವತರೋಪನಿಷತ್, ಅಧ್ಯಾಯ ೪ ಮಂತ್ರ ೬।೭

೪ ಋಗ್ವೇದ ಅಧ್ಯಾಯ ೪ ಅಷ್ಟಕ ೭ ಜೀವನ ತ್ರೈವಿಧ್ಯ
ಶೃಣ್ವೇವಿರಉಗ್ರಮುಗ್ರಂದಮಾಯನ್ನಾನ್ಯಾಮತಿನೇ
ಪರಾ ಪೂರ್ವೇ ೩ಂ ಸಂಖ್ಯಾವೃಣಕ್ತಿ ।

೫ ಬೃಹದಾರಣ್ಯ ಉಪನಿಷತ್ ಅಧ್ಯಾಯ ೬-೩-೩೩ ನೇ ಮಂತ್ರ
ಸಯೋಹವೈ ಮನುಷ್ಯಾ . ರಾದ್ಧ, ಆನಂದ ತಾರತಮ್ಯ ಭಾಷ್ಯವ
ಖಂಡಾರ್ಥ

೬ ತೈತ್ತರಿಯೋಪನಿಷತ್ ದ್ವಿತೀಯ ವಲ್ಲಿ, ಮಂತ್ರ ೧೭-೧೮-೧೯-೨೦
೨೧-೨೨ ಆನಂದ ತಾರತಮ್ಯ ( ಭಾಷ್ಯ, ಖಂಡಾರ್ಥ )

೭ ಛಾಂದೋಗ್ಯ ಉಪನಿಷತ್ ಅಧ್ಯಾಯ ೭ ಸಂಪೂರ್ಣ ಮತ್ತು
ಶ್ರೀಮದಾಚಾರ್ಯರ ಭಾಷ್ಯ ಕೊನೆಯ ಭಾಗ
ನಾಮಾಭಿಮಾನಿಚೋಷಾ ಇತ್ಯಾದಿ ದೇವತೆಗಳ ತಾರತಮ್ಯ

೮ ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ ೩ ಪಾದ ೩ ಸೂತ್ರ ೩೫
ಓಂ ಇಯದಾಮನನಾತ್ ಓಂ, ನಾಮಾದ್ಯಾಮಾರಭ್ಯ ಪ್ರಾಣಾಂತ
ಮುತ್ತರೋತ್ತರ ಮುಕ್ತತ್ವಮ್

೯ ಜಗನ್ನಾಥಸ್ವಾಮಿಗಳ ಭಾಷ್ಯದೀಪಿಕಾ ಪಾನು ೮೬೨

೧೦ ಅನುವ್ಯಾಖ್ಯಾನ ಮೇಲಿನ ಸೂತ್ರಕ್ಕೆ ಅಧಿಕಾರಿ ತಾರತಮ್ಯ
ಇಯದೇವ, ಪ್ರಾಣಾ ಅಧಿಕಮೇವ, ಇತ್ಯಾದಿ

೧೧ ಶ್ರೀಮನ್ನ್ಯಾಯ ಸುಧಾ ಗ್ರಂಥ, ಟೀಕಾ ಕೃತ್ಪಾದ ಪ್ರಣೀತ ಅಧ್ಯಾಯ ೩ ಪಾದ ೩ ಅಧಿಕರಣ ೨೧ ಇಯದಾ ಮನನಾತ ಸೂತ್ರಕ್ಕೆ ಪುಷ್ಕರೋನಾಮ ಸರ್ವವರೋದೇವಾ ಇತ್ಯಾದಿ

೧೨ ಅಧಿಕಾರ ವಿವಕ್ಷಯಾ ಮುಕ್ತ ತಾರತಮ್ಯ
ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ ೩ ಪಾದ ೩ ಅಧಿಕರಣ ೨೦ ಸೂತ್ರ ೨೩ ಓಂ ಯಾವದಧಿಕಾರ ಮವಸ್ಥಿತಿರಾಧಿಕಾರಿಣಾಮ್ ಓಂ ಯಥಾಯಥಾ ಅಧಿಕಾರೋವಿಶಿಷ್ಯತೇ ಏವಂಮಕಾನಂದೋ ವಿಶಿಷ್ಯತೆ ಮನುಷ್ಯೇಭ್ಯೋ ಗಂಧರ್ವಾಣಾಂ ಗಂಧರ್ವೇಭ್ಯೋ ಋಷಾಣಾಮಿತ್ಯಾದಿ.

೧೩ ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ ೪ ಪಾದ ೪ ಅಧಿಕರಣ ೯ ಸೂತ್ರ ೧೯ ಓಂ ಪ್ರತ್ಯಕ್ಷೋಪದೇಶಾದಿತಿ, ಚೇನ್ನಾಧಿಕಾರಿಕ ಮಂಡಲಸ್ಥೋಕ್ತೇಃ ಓಂ (ಮುಕ್ತಸ್ಥಾನ) ತಾರತಮ್ಯ ವಿ॥ ಭಾಷ್ಯ ನೋಡುವದು.

೧೪ ಕೇನೋಪನಿಷದ – ಜ್ಞಾನ ತಾರತಮ್ಯ ವಿ॥ (ಖಂಡಾರ್ಥ)

೧೫ ಬ್ರಹದಾರಣ್ಯೋಪ ನಿಷದ ಭಾಷ್ಯ – ಬ್ರಹತ್ತಾರತಮ್ಯ ವಿ॥ (ಖಂಡಾರ್ಥ ಸಹಿತ)

೧೬ ಪ್ರಕಾಶ ಸಂಹಿತಾ, ಪರಿಚ್ಛೇದ ೧ ಅಧ್ಯಾಯ ೧೦ ೧೧ ಚತುರ್ದಶ ವಿಧ ತಾರತಮ್ಯ ವಿ॥

೧೭ ಗರುಡ ಪುರಾಣ ಬ್ರಹ್ಮಕಾಂಡ ಕೆಲವು ಅಧ್ಯಾಯಗಳು

೧೮ ಋಗ್ಭಾಷ್ಯ ಟೀಕಾ, ೧೯ ತತ್ವ ಸಂಖ್ಯಾನ, ೨೦ ವಾಯುಪುರಾಣ

೨೧ ಶ್ರೀಮದ್ಭಾಗವತ ಕೆಲವು ಸ್ಕಂಧಗಳು

೨೨ ಶ್ರೀಮದ್ಭಗವದ್ಗೀತಾ, ಅಧ್ಯಾಯ ೨, ೧೩, ೧೬ ೧೭

೨೩ ಶ್ರೀ ಮಹಾ ಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧ ಶ್ಲೋಕ ೬೮ ರಿಂದ ೯೫

೨೪ ಶ್ರೀ ಮಂತ್ರಾಲಯ ಪ್ರಭುಕೃತ ಪ್ರಮೇಯ ಸಂಗ್ರಹ
೨೫ ಸತ್ತತ್ವರತ್ನಮಾಲಾ ೨೬ ಮಧ್ವಸಿದ್ಧಾಂತ ಸಾರ (ಅಚ್ಚು)
೨೭ ಶ್ರೀನಿವಾಸ ತೀರ್ಥವಿರಚಿತ ನವಶ್ಲೋಕಿ ತಾರತಮ್ಯ ಸ್ತೋತ್ರ
ಟೀಕಾ ವೆಂಕಟೇಶಕೃತ
೨೮ ಮುದ್ಗಲಾನಂದ ತೀರ್ಥ ೨೯ ಶ್ರೀ ಮುಷ್ಣ ಆಚಾರ್ಯ
೩೦ ಭಾವಿಕೇರಿ ಆಚಾರ್ಯಕೃತ ಸಂಸ್ಕೃತ ಗ್ರಂಥಗಳು
೩೧ ತಾರತಮ್ಯ ಪ್ರಮೇಯ ಮಾಲಾ ಸತ್ಯಪರಾಕ್ರಮ ತೀರ್ಥಕೃತ
೩೨ ಅಣುತಾರತಮ್ಯ ಟೀಕಾ ಶ್ರೀನಿವಾಸಾಚಾರ್ಯ ಕೃತ
೩೩ ಲಘು ತಾರತಮ್ಯ ಟೀಕಾ ಉಮ್ಮರ್ಜಿ ಪ್ರಹ್ಲಾದ ಕೃಷ್ಣಾಚಾರ್ಯ
೩೪ ತಾರತಮ್ಯ ಭಾವ ಪ್ರಕಾಶಿಕಾ ವೆಂಕಟಾರ್ಯಕೃತ
೩೫ ಶ್ರೀ ವ್ಯಾಸತೀರ್ಥ ಪ್ರಶಿಷ್ಯ ವಿರಚಿತ ಬ್ರಹ್ಮತಾರತಮ್ಯ ಸ್ತೋತ್ರ
ಸದ್ರತ್ನಮಾಲಾ ಮತ್ತು ಟೀಕಾ
೩೬ ಅಥರಾಪುರ ಪುರುಷೋತ್ತಮಾಚಾರ್ಯ ಕೃತ ತಾರತಮ್ಯ ಸದ್ರತ್ನ
ಮಾಲಾ ವಿವೃತಿ (ಅಚ್ಚು)
೩೭ ಸುರಪುರ ಎಹೆಮೂಲಿ ಆಚಾರ್ಯ ಕೃತ ತಾರತಮ್ಯ ಅಚ್ಚು
೩೮ ಶ್ರೀ ಲಕ್ಷ್ಮೀ ಮನೋಜ್ಞ ತೀರ್ಥ ವಿರಚಿತ ತಾರತಮ್ಯ ಪ್ರಕಾಶಿಕಾ
೩೯ ತಾರತಮ್ಯ ಮಾಲಾ ಸ್ತೋತ್ರ (ಪೂರ್ವಜರು) ರಾಮಾಚಾರ್ಯ
ಕೃತ ಅನೇಕ ಉಪನಿಷತ್ ಪ್ರಮಾಣೇನ
೪೦ ಶ್ರೀ ಹರಿಕಥಾಮೃತಸಾರ ಸಂಧಿಗಳು ೧೦
೪೧ ಅಧ್ಯಾತ್ಮಮಾಲಾ ರಘುಪತಿ ವಿಠ್ಠಲ ವಿರಚಿತ
೪೨ ಕೋಸಿಗಿ ಆಚಾರ್ಯ ಸಂಗ್ರಹಿತ ಪರಾಪರ ತತ್ವ ದೀಪಿಕಾದಿ
ಪ್ರಮಾಣ ಗ್ರಂಥಗಳ ವಿಮರ್ಶಮಾಡಿ ಚನ್ನಾಗಿ ಅರಿತವರಿಂದ
ತಿಳಿಯುವದು. ಈಗ ಮಾಲ ಸೂಚಿಗಳು ಕೊಟ್ಟು ಮುಂದೆ
ತಾರತಮ್ಯ ಪಂಚ ಭೇದ ಗ್ರಂಥಗಳಲ್ಲಿ ವಿಮರ್ಶೆಯೊಡನೆ ಸವಿಸ್ತರ
ಪ್ರಕಟಿಸಲಾಗುವದು. ಪ್ರಕಾಶಕರು.

ಶ್ರೀ ಶ್ರೀ ವರದೇಂದ್ರ ಸ್ವಾಮಿಗಳವರು



# ಉಪೋದ್ಘಾತ

ಶ್ರೀಮನ್ ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತೋ ।
ಭಿನ್ನಾಃ ಜೀವಗಣಾಃ ಹರೇರನುಚರಾಃ ನೀಚೋಚ್ಚ ಭಾವಂಗತಾಃ ॥
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥೧॥

## ೧. ಸಚ್ಛಾಸ್ತ್ರ ಮತ್ತು ತತ್ಪ್ರವರ್ತಕರ ವಿಚಾರವು

ಸದಾಗಮವೆಂದು ಕರೆಸುವ ಋಗ್ವೇದ ಯಜುರ್ವೇದ ಸಾಮವೇದ ಶ್ರೀಮನ್ಮಹಾಭಾರತ ಮೂಲ ರಾಮಾಯಣ ಪಂಚರಾತ್ರಾಗಮ. ಇವುಗಳ ಅರ್ಥ ನಿರ್ಣಾಯಕವಾದ ಶ್ರೀಬ್ರಹ್ಮಸೂತ್ರಗಳು, ಪ್ರಮಾಣವೆಂದು ಕರೆಸುತ್ತವೆ. ಇವುಗಳ ತಾತ್ಪರ್ಯಾರ್ಥಗಳನ್ನು ಸ್ಪಷ್ಟವಾಗಿ ಅಧಿಕಾರಿಗಳಿಗೆ ತಿಳಿಸಿಕೊಡುವ ಸರ್ವ ಮೂಲ ಗಂಥಗಳನ್ನು ಶ್ರೀಮದಾನಂದ ತೀರ್ಥ ಭಗವತ್ಪಾದರು ವಿರಚಿಸಿರುತ್ತಾರೆ. ಇವರ ಪ್ರಸಾದದಿಂದ ಇವರ ನಿಜಭಾವವನ್ನು ಬಲ್ಲ ಶ್ರೀಟೀಕಾಚಾರ್ಯರಿಂದ ನಿರ್ಮಿಸಲ್ಪಟ್ಟ ಟೀಕಾ ಗ್ರಂಥಗಳ ಗೂಢಾರ್ಥಗಳನ್ನು ಸುಜೀವಿಗಳಿಗೆ, ತಿಳಿಸುವ ಉದ್ದಿಶ್ಯದಿಂದ ಶ್ರೀವ್ಯಾಸರಾಜರು. ಶ್ರೀರಘೋತ್ತಮತೀರ್ಥರು ಶ್ರೀವಿದ್ಯಾಧೀಶತೀರ್ಥರು. ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರು ಶ್ರೀಯಾದವಾಚಾರ್ಯರು. ಮತ್ತು ಶ್ರೀನಿವಾಸತೀರ್ಥರು ಇವರೆ ಮೊದಲಾದ ಜ್ಞಾನಿಗಳು ಸಂಸ್ಕೃತ ಭಾಷೆಯಲ್ಲಿ ಟಿಪ್ಪಣಿಗ್ರಂಥಗಳನ್ನು ರಚಿಸಿರುವಂತೆ ಮುಂದೆ ಕಾಲಾನುಸಾರ ಅನೇಕ ಕಾರಣಗಳಿಂದ ಮಂದಭಾಗ್ಯ

ರಾಗಿ ಜನಿಸುವ ದೀನಜನರ ಉದ್ಧಾರಗೋಸುಗ ಭಗವದನುಜ್ಞೆಯಿಂದ ಭಾರತಭೂಮಿಯಲ್ಲಿ ಅವತೀರ್ಣರಾದ ಶ್ರೀಮನ್ನಾರದರು ಶ್ರೀಪುರಂದರ ದಾಸರೆಂಬ ನಾಮರೂಪವುಳ್ಳವರಾಗಿ, ಮಿಂಚಿನಂತೆ ಹೊಳೆವ ಕಿಂಚಿನ್ನ್ಯೂನ ಪಂಚಲಕ್ಷ ಗ್ರಂಥಗಳನ್ನು ಕರ್ನಾಟಕ ಭಾಷೆಯಲ್ಲಿ ಟಿಪ್ಪಣೀರೂಪವಾಗಿ ರಚಿಸಿರುತ್ತಾರೆ. ಮೇಲ್ಕಂಡ ಗಂಥಗಳಿಗೆ "ಪುರಂದರೋಪನಿಷತ್" ಯೆಂಬ ನಾಮವನ್ನು ಇವರ ನಿಜಗುರುಗಳಾದ ಶ್ರೀವ್ಯಾಸರಾಜರು ಕೊಟ್ಟಿರುತ್ತಾರೆ ಈ ಪುರಂದರೋಪನಿಷತ್ ಎಂಬಗ್ರಂಥ ಸಮುದಾಯವು, ಪದ ಸುಳಾದಿ, ಉಗಾಭೋಗ ಎಂದು ಮೂರುಭಾಗಗಳಿಂದ ಪ್ರಖ್ಯಾತವಾಗಿರುವದು. ಇವರ ಅನುಯಾಯಿಗಳಾದ ದಾಸಜನರೆಲ್ಲರೂ ಇವರ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಾರೆ. ಇವರ ಮುಖ್ಯಶಿಷ್ಯರಾದ ಶ್ರೀವಿಜಯದಾಸರಾಯರು ಭೃಗುಮುನೀಶ್ವರರ ಅವತಾರ ರೂಪರು ಇವರು ಎಪ್ಪತ್ತೈದು ಸಾವಿರ ಗ್ರಂಥಗಳನ್ನು ರಚಿಸಿ "ಶ್ರೀಪುರಂದರೋಪನಿಷತ್" ಪಂಚಲಕ್ಷ ಸಂಖ್ಯೆಯನ್ನು ಪೂರ್ಣ ಮಾಡಿರುತ್ತಾರೆ. ಇವರ ಶಿಷ್ಯರಾದ ಶ್ರೀಗೋಪಾಲದಾಸರಾಯರು ಗಣೇಶಾಂಶರು; ಇವರ ಶಿಷ್ಯರಾದ ಶ್ರೀಜಗನ್ನಾಥದಾಸರಾಯರು. ಸಹ್ಲಾದಾಂಶರುಯೆಂದು ಸಜ್ಜನರಲ್ಲಿ ಸತ್ಸಂಪ್ರದಾಯ ಪರಂಪರಾಪ್ರಾಪ್ತ ಪ್ರಖ್ಯಾತಿಇದೆ ಶ್ರೀಜಗನ್ನಾಥದಾಸರಾಯರಿಂದ ರಚಿಸಲ್ಪಟ್ಟ "ಶ್ರೀಮನ್-ಹರಿಕಥಾಮೃತಸಾರ" ಎಂಬ ಪ್ರಾಸಾದಿಕ ಗ್ರಂಥವನ್ನು ನೋಡಲಾಗಿ ಅಣುಸುಧೆಯೆಂದು, ಪ್ರಾಚೀನರಿಂದ ಕರೆಸಲ್ಪಟ್ಟ ಈ ಪವಿತ್ರನಾಮವು ಬಹುತರವಾಗಿ ಶೋಭಿಸುತ್ತದೆ. ಎಂಬದು ಪ್ರತಿಯೊಬ್ಬ ಸದ್ವೈಷ್ಣವರಿಗೆ ಸಮ್ಮತವಷ್ಟೆ? ಶ್ರೀಹರಿದಾಸ ಜನಗಳಿಂದ ರಚಿಸಲ್ಪಟ್ಟ ಗ್ರಂಥಗಳು, ಪ್ರಾಚೀನ ಟೀಕಾಟಿಪ್ಪಣಿ ಗ್ರಂಥಗಳಂತೆ, ಪ್ರಮಾಣತವಾಗಿರುವವಲ್ಲದೆ, ದಾಸ ಶಿಶುಗಳಿಗೆ ಅಕುಶಲ ಸಂಸಾರವೆಂಬ ಆಶೀವಿಷದ ಧಂಶದಿಂದ ಪಸರಿಸಿದ ವಿಷವನ್ನು ಪರಿಹರಿಸಿ, ಪರತತ್ವ

ಗಳ ಮಹಿಮಾಮೃತವನ್ನು, ನಿತ್ಯ ಹೊಸ ಸವಿಯಿಂದುಣಲಿತ್ತು ಶ್ರೀ ಹರಿಯ ಪ್ರಸಾದದಿಂದ ಅವರವರ ನಿಜಸ್ಥಿತಿಗಳನ್ನು, ವ್ಯಕ್ತಿಗೈಸಿ, ಹೊಂದಿಸುವವು. ಶ್ರೀಜಗನ್ನಾಥ ದಾಸ ರಾಯರ ಶಿಷ್ಯರು ಶ್ರೀಪ್ರಾಣೇಶ ದಾಸರಾಯರು, ಅವರ ಪ್ರಶಿಷ್ಯರು ಶ್ರೀಗುರು ಪ್ರಾಣೇಶದಾಸರಾಯರು ಇವರೆಲ್ಲ ಅಪರೋಕ್ಷ ಜ್ಞಾನಿಗಳೆಂದು ಕರೆಸಿರುತ್ತಾರೆ. ಇವರಗ್ರಂಥದಲ್ಲಿ ಪ್ರತಿಪಾದಿತವಾದ ತತ್ವವಿಚಾರವನ್ನು ಪರಮಾದರ ದಿಂದ ಮಾಡುವದು ಪ್ರತಿಯೊಬ್ಬ ಮುಮುಕ್ಷುವಿಗೂ ಅತ್ಯವಶ್ಯಕವಾದ ಕರ್ತವ್ಯ.

ಸಂಕ್ಷೇಪರ ತತ್ವವಿಚಾರ

ಶ್ರೀ ಹರಿಯು, ಸ್ವತಂತ್ರನೂ, ನಿತ್ಯಮುಕ್ತನೂ, ಸರ್ವೋತ್ತಮನೂ, ನಿರ್ವಿಕಾರನೂ, ನಿರ್ದೋಷಜ್ಞಾನಾಂದಾದಿ ಗುಣ ಪರಿಪೂರ್ಣನೂ. ಚೇತನಾಚೇತನಾತ್ಮಕ ಜಗಜ್ಜನ್ಮಾದಿ ಕಾರಣನೂ, ಸ್ವರಮಣನೂ ನಿರಪೇಕ್ಷನೂ; ಸಮಾಧಿಕರಹಿತನೂ, ಸ್ವಗತಭೇದ ವಿವರ್ಜಿತನೂ, ಪ್ರಕೃತಿ ಕಾಲದೇಶಾತೀತನೂ, ಸದಾಗಮೈಕವಿಜ್ಞೇಯನೂ; ಸಾಕಲ್ಯೇನ ಅಪ್ರಮೇಯನೂ, ಕ್ಷರಾಕ್ಷರ ಪುರುಷೋತ್ತಮನೂ, ಜೀವಜಡರಿಗೆ ಭಿನ್ನನೂ, ಇರುವನು.

ಇವನ ಸ್ವರೂಪ ಗುಣ ಕ್ರಿಯೆಗಳು ಪೂರ್ಣವಾದವುಗಳು. ಮುಕ್ತಾಮುಕ್ತನಿಯಾಮಕನೂ, ನಿತ್ಯಮುಕ್ತಳಾದ ರಮಾದೇವಿಯವರಿಗೆ ರಮಣನು, ಇತ್ಯಾದಿ ಅನೇಕ ಗುಣಗಳು ಸಕಲ ಸಚ್ಛಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಸರ್ವೇಶ್ವರನಾದ ಶ್ರೀಹರಿಗೆ ನೇಮ್ಯರಾದ ದಾಸಜನರು, ಇರದಹೊರತು ಪರಮಾತ್ಮನ ಸರ್ವೇಶರತ್ವವು ಪ್ರಕಟಿಸಲಾರದು. ಶ್ರೀ ಹರಿಯು ಯಾರಿಗೆ ಈಶನು? ಎಂದರೆ ಚೇತನಾಚೇತನ ವಸ್ತುಗಳಿಗೆಂದು ಪ್ರತ್ಯುತ್ತರವು. ಚೇತನರೆಲ್ಲರು ಉತ್ಪತ್ತಿ ನಾಶವಿಲ್ಲದ ಸ್ವರೂಪ ವುಳ್ಳವರು. ಚೇತನವರ್ಗದಲ್ಲಿ ಶ್ರೀ ರಮಾದೇವಿಯು ನಿತ್ಯಮುಕ್ತಳು, ಪರತಂತ್ರ ಚೇತನಳು, ಉಳಿದ ಜೀವರಲ್ಲಿ ಕೆಲ

ವರ್ಣ ಸಾಧನದಿಂದ ಪ್ರಕೃತಿ ರೂಪವಾದ ಲಿಂಗ ಶರೀರ ಬಂಧನದಿಂದ ಮುಕ್ತಿಯನ್ನು ಹೊಂದುವದಕ್ಕೆ ತಕ್ಕ ಸಾಧನಾರ್ಥವಾಗಿ ಸೃಷ್ಟಿಯಲ್ಲಿ ಬಂಧವಳು, ಇನ್ನೂ ಕೆಲವು ಅದ್ಯಾಪಿ ಸೃಷ್ಟಿಗೆ ಬಾರದೆ ಲಿಂಗ ಶರೀರ ಮಾತ್ರಧಾರಿಗಳಾಗಿ ಅಸೃಜ್ಯಾವಸ್ಥೆಯಲ್ಲಿ ಶ್ವಾಸೋಚ್ಛ್ವಾಸ ವ್ಯಾಪಾರಮಾತ್ರ ನಿರತರಾಗಿ ತರತಮ ಭಾವದಿಂದಿರುತ್ತಾರೆ ಅಸೃಜ್ಯಾವಸ್ಥೆಯಲ್ಲಿರುವ ಜೀವರಿಗೆ, ಶ್ರೀಹರಿಯು ಪ್ರಾಜ್ಞರೂಪದಿಂದ ನಿಯಾಮಕನಾಗಿರುತ್ತಾನೆ ಸಂಸಾರಾವಸ್ಥೆಯಲ್ಲಿ ತರತಮ ಭಾವದಿಂದಿರುವ ಜೀವರಿಗೆ ಅಪರೋಕ್ಷ ಜ್ಞಾನವಿಲ್ಲದಕಾಲದಲ್ಲಿ ತೈಜಸರೂಪದಿಂದ ನಿಯಾಮಕ ನಾಗಿರುತ್ತಾನೆ.

ಅಪರೋಕ್ಷ ಜ್ಞಾನಿಗಳಾದ ಜೀವರಿಗೆ ವಿಶ್ವರೂಪದಿಂದಲೂ, ಸಂಸಾರ ಮುಕ್ತರಾದ ತರತಮ ಭಾವದಿಂದಿರುವ ಜೀವರಿಗೆ. ತುರಿಯನಾಮಕ ವಾಸುದೇವರೂಪದಿಂದಲೂ; ನಿಯಾಮಕನಾಗಿರುತ್ತಾನೆ. ನಿತ್ಯಮುಕ್ತಳಾದ ರಮಾದೇವಿಗೆ ನಾರಾಯಣ ರೂಪದಿಂದ ನಿಯಾಮಕ ನಾಗಿರುತ್ತಾನೆ. ಈ ಪ್ರಕಾರ ಎಲ್ಲ ಪರತಂತ್ರ ಚೇತನರು, ಸ್ವತಂತ್ರನಾದ ಶ್ರೀಹರಿಗೆ ನಿಯಮ್ಯರೂ ಅಧಮರೂ ಭಿನ್ನರೂ, ಯತ್ಕಿಂಚಿತ್ಸದೃಶರೂ ಸರ್ವಾವಸ್ಥೆಗಳಲ್ಲಿ ಅವನ ಅಧೀನತೆಯನ್ನು ಯಾವ ಬಗೆಯಿಂದಲೂ ವಿಸ್ತಾರಲಶಕ್ಯರೂ, ಆಗಿರುವದರಿಂದ ಶ್ರೀಹರಿಗೆ ರಮಾ ಬ್ರಹ್ಮಾದಿ ಸಕಲ ಚೇತನರೂ ಪ್ರತಿಬಿಂಬರೆನಿಸಿಕೊಳ್ಳುತ್ತಾರೆ. ಶ್ರೀವರನು ಇವರಿಗೆ ಕೇವಲ ಬಿಂಬನು, ಉತ್ತಮಚೇತನರು ಅಧಮರಿಗೆ ಬಿಂಬರೆಂದರ್ಥವು ಅಧಮಜೀವರು ಉತ್ತಮರಿಗೆ ಪ್ರತಿಬಿಂಬರೆಂದು ಕರೆಸುತ್ತಾರೆ. ರಮಾ ಬ್ರಹ್ಮಾದಿಗಳು ಬಿಂಬರೂಪಿಯಾದ ಪರಮಾತ್ಮನಿಗೆ ಪ್ರತಿಬಿಂಬರಾಗಿ ಸ್ವಾವರರಿಗೆ ಬಿಂಬರಾಗಿರುತ್ತಾರೆ. ರಮಾ ಬ್ರಹ್ಮಾದಿಗಳಲ್ಲಿರುವ ಬಿಂಬ ಪ್ರತಿಬಿಂಬಭಾವವು ಶ್ರೀ ಹರಿಯಲ್ಲಿಲ್ಲದೆ, ಕೇವಲ ಬಿಂಬ ಭಾವವು ಮಾತ್ರವುಂಟು. ಅಂದರೆ ಶ್ರೀಹರಿಗೆ ಯಾರೂನಿಯಾಮಕರಿಲ್ಲದಕಾರಣ ಶ್ರೀಹರಿಯು ಪ್ರತಿಬಿಂಬನಾಗುವದಿಲ್ಲ ನಿರ್ದೋಷಾನಂದ ಪೂರ್ಣನಾದ

ಶ್ರೀಹರಿಯು ತನ್ನ ಆನಂದೋದ್ರೇಕದಿಂದ ಚೇತನಾಚೇತನ ಪ್ರಪಂಚ-ದಲ್ಲಿ ಪ್ರವೇಶವಿಲ್ಲದೆ, ಕೃಪೆಯಿಂದ ವಿಹಾರವನ್ನು ಮಾಡುತ್ತಾನೆ. ಈತನ ವಿಹಾರವು ಶ್ರೀ ರಮಾದೇವಿಯರಿಗೆ ಆನಂದ ಜ್ಞಾನ ವುತ್ಸಾಹ ಗೋಸ್ಕರ ವಾಗುವವಲ್ಲದೆ ಜೀವರುಗಳ ನಿಜಸ್ವರೂಪೋದ್ಧಾರಕ್ಕೆ ಕಾರಣವಾಗುತ್ತದೆ

ಬಿಂಬ ಪ್ರತಿಬಿಂಬ ಭಾವ ವಿಚಾರ

ಸ್ವರೂಪದೊಡನೆ ಅನಾದಿಕಾಲದಿಂದ ಸಂಬಂಧಿಸಿಕೊಂಡಿರುವ ಲಿಂಗ ಶರೀರ ವೆಂಬ ಬಂಧನವು ಇಂದಿರೇಶನ ದಯದಿಂದ ಬಿಡುಗಡೆಯನ್ನು ಹೊಂದಿದ ಮೇಲೆ ಜೀವರಸ್ವರೂಪ ವೆಂಬ ಉಪಾಧಿಯಲ್ಲಿ ಜೀವರ ಜ್ಞಾನಾನಂದಾದಿ ಗುಣಗಳೆಂಬೊ ಪ್ರತಿಬಿಂಬಗಳಿಗೆ ಶ್ರೀಪರಮಾತ್ಮನ ಪೂರ್ಣ ಜ್ಞಾನಾನಂದಾದಿ ಗುಣಗಳು ಬಿಂಬ ರೂಪ ಗಳೆಂದು ಕರೆಸುತ್ತವೆ ಹತ್ತು, ನೂರು, ಸಾವಿರ ಮತ್ತು ಲಕ್ಷ, ಕ್ಯಾಂಡಲ್ ಪವರುಳ್ಳ ಬಲ್ಬುಗಳೆಂಬ ಉಪಾಧಿಗಳಿಂದ ಆಗುವ ಪ್ರಕಾಶಕ್ಕೆ ನಿಮಿತ್ತ ಕಾರಣವಾದ ವಿದ್ಯುತ್ ಶಕ್ತಿರೂಪವಾದ ಪದಾರ್ಥ ವೊಂದೇಯಿದ್ದಾಗ್ಯೂ ಉಪಾಧಿಯ ಶಕ್ತಿ ತಾರತಮ್ಯಾನುಸಾರ ಪ್ರಕಾಶದಲ್ಲಿ ತಾರತಮ್ಯ ವುಂಟಾಗಿರುವಂತೆ ಜೀವರ ಸ್ವರೂಪ ಗುಣಗಳಲ್ಲಿ ತಾರತಮ್ಯವು ನೈಸರ್ಗಿಕವಾಗಿ ಅನಾದಿ ಸಿದ್ಧವಾಗಿರುತ್ತದೆ

ಭಾವಾಭಾವ ವಿಚಾರ

॥ ಪರಮಾತ್ಮನಿಗೆ ಆಧೀನವಾಗಿರುವ ವಸ್ತುಗಳೆರಡು ॥

೧ ಭಾವ ಮತ್ತು ೨ ಅಭಾವ

೨ ಅಭಾವವು ಮೂರು ವಿಧವು

೧ ಪ್ರಾಗಭಾವ – ಉತ್ಪತ್ತಿಯಿಲ್ಲದೆ ನಾಶವುಳ್ಳದ್ದು.

೨ ಪ್ರಧ್ವಂಸಾಭಾವ - ಉತ್ಪತ್ತಿಯಿದ್ದು ನಾಶ ರಹಿತ ವಾದದ್ದು

೩ ಅತ್ಯಂತಾಭಾವ - ತ್ರಿಕಾಲದಲ್ಲಿ ಉತ್ಪತ್ತಿ ನಾಶರಹಿತವಾದದ್ದು

೧ ಮೋಕ್ಷದ ಪ್ರಾಗಭಾವವು ಸಂಸಾರಿಗಳಲ್ಲಿರುವದು

೨ ಸಂಸಾರದ ಪ್ರಧ್ವಂಸಾಭಾವವು ಜೀವರಿಗೆ ಮುಕ್ತಿದಶೆಯಲ್ಲಿವುಂಟು

೨ ನಿತ್ಯಮುಕ್ತಳಾದ ರಮಾದೇವಿಗೆ ಮೋಕ್ಷದ ಪ್ರಾಗಭಾವವೂ ಸಂಸಾರದ ಪ್ರಧ್ವಂಸಾಭಾವವೂ ಯಿಲ್ಲದೆ ಶ್ರೀಪರಮಾತ್ಮನದಯ ದಿಂದ ಸರ್ವದಾ ಸಂಸಾರದ ಅತ್ಯಂತಾಭಾವವೂ ಉಂಟು.

ಭಾವ ವಿಚಾರ

ಚೇತನಾಚೇತನ ಗಳೆಂದು ಭಾವವು ದ್ವಿವಿಧವು

ಚೇತನ ವಿಚಾರ

೧ ದುಃಖಾಸ್ಪೃಷ್ಟರೆಂದೂ ೨ ದುಃಖಸಂಸ್ಥರೆಂದೂ ದ್ವಿವಿಧ

೧ ದುಃಖಾ ಸ್ಪೃಷ್ಟರು ನಿತ್ಯಮುಕ್ತರಾದ ರಮಾದೇವಿಯವರು
ಈಶ ಕೋಟಿ ಪ್ರವಿಷ್ಟಳು

೨ ದುಃಖ ಸಂಸ್ಥರು - ೧ ಲಿಂಗ ಶರೀರದಿಂದ ಮುಕ್ತಜೀವರು
(೨) ಲಿಂಗ ಶರೀರ ದಿಂದ ಅಮುಕ್ತ ಜೀವರು

ಮುಕ್ತಜೀವರು ತ್ರಿವಿಧ

೧ ಸ್ವ ಸ್ವರೂಪ ಸುಖಾನುಭವ ಜೀವಿಗಳು
೨ ಸ್ವ ಸ್ವರೂಪ ದುಃಖಾನುಭವ ಜೀವಿಗಳು
೩ ಸ್ವ ಸ್ವರೂಪ ಸುಃಖ ದುಃಖಾನುಭವ ಜೀವಿಗಳೆಂದು ತ್ರಿವಿಧ

ಅಮುಕ್ತ ಜೀವರು – ತ್ರಿವಿಧ

೧ ಸುಖಸ್ವರೂಪರು ೨ ದಃಖ ಸ್ವರೂಪರೂ ೩ ಸುಖದುಃಖ ಮಿಶ್ರ ಸ್ವರೂಪರೆಂದು ಮೂರುವಿಧ

ಮುಕ್ತರು ಮತ್ತು ಅಸೃಜ್ಯಾವಸ್ಥೆಯಲ್ಲಿರುವವರು ಸಂಖ್ಯಾ ನೇಮವಿಲ್ಲದೆಇರುತ್ತಾರೆ. ಸೃಷ್ಟಿಗೆ ಸಾಧನಾರ್ಥವಾಗಿ ಬಂದು ಸಂಸಾರದಲ್ಲಿರತಕ್ಕ ಜೀವನು. ತಾತ್ವಿಕ ದೇವತಾ ನಿಯಮನಕ್ಕೆ ಒಳಪಟ್ಟವರಾದ ಕಾರಣ ಸಂಖ್ಯಾ ನೇಮ ಉಳ್ಳವರು.

ಹಿಂದೆ ಹೇಳಿದ ತ್ರಿವಿಧ ಜೀವರುಗಳಲ್ಲಿ ಸಾತ್ವಿಕರಾದ ಸುಖಸ್ವರೂಪ ಜೀವರು ಐದು (೫) ವಿಧ

೧ ದೇವ ೨ ಋಷಿ ೩ ಪಿತೃ ೪ ರಾಜ ೫ ನರರೆಂದು ಪಂಚವಿಧ
ತಾಮಸ ದುಃಖ ಸ್ವರೂಪರಾದ ಜೀವರು ನಾಲ್ಕು ವಿಧ
೧ ನರಾಧಮ ೨ ಪಿಶಾಚ ೩ ರಾಕ್ಷಸ ೪ ದೈತ್ಯ ಎಂದು ಚತುರ್ವಿಧ
ರಾಜಸರಾದ ಮಿಶ್ರ ಸುಖ ದುಃಖ ವುಳ್ಳ ಜೀವರು ತ್ರಿವಿಧ
೧ ಸುಖಪ್ರಚುರ ಮಿಶ್ರಸ್ವರೂಪ ೨ ದುಃಖಪ್ರಚುರ ಮಿಶ್ರಸ್ವರೂಪ
೩ ಸಮ ಸುಖ ದುಃಖ ಮಿಶ್ರ ಸ್ವರೂಪ ವೆಂದು ತ್ರಿವಿಧ.

ಮೇಲ್ಕಂಡ ನಾನಾವಿಧ ಜೀವರುಗಳನ್ನು ಪರಮಾತ್ಮನು ಸೃಷ್ಟಿಯಲ್ಲಿ ತಂದು ಅವರ ಸಾಧನಾರ್ಥವಾಗಿ ಅಚೇತನ ವಸ್ತುಗಳನ್ನು ಒದಗಿಸಿ ಕೊಟ್ಟಿರುತ್ತಾನೆ

ಅಚೇತನ ವಸ್ತು ವಿಚಾರ

ಅಚೇತನ ವಸ್ತುಗಳೆಂದರೆ ಜ್ಞಾನೇಚ್ಛಾ ಶೂನ್ಯವಾದ ಸುಖ ದುಃಖಾನುಭವ ಯೋಗ್ಯತಾ ರಹಿತವಾದ ಪರತಂತ್ರ ಕ್ರಿಯಾ ಶಕ್ತಿಮಾತ್ರ ವುಳ್ಳದ್ದು ಆನಂದ ತಾರತಮ್ಯ ಶ್ರುತಿಯಲ್ಲಿ ನಿರೂಪಿತವಾದ ತಾರತಮ್ಯವು ಅಚೇತನದಲ್ಲಿಲ್ಲ. ತಾರತಮ್ಯವಿಲ್ಲದೆ ಇರತಕ್ಕ ಅಚೇತನ ಸಮುದಾಯವು ಮೂರು ಪ್ರಭೇದ ವುಳ್ಳದ್ದು.

೧ ನಿತ್ಯಾಚೇತನ ೨ ನಿತ್ಯಾನಿತ್ಯಾ ಚೇತನ ೩ ಅನಿತ್ಯಾ ಚೇತನ

೧ ನಿತ್ಯಾ ಚೇತನ – ವೇದ, ವರ್ಣ, ಅವ್ಯಾಕೃತಾಕಾಶ

೨ ನಿತ್ಯಾನಿತ್ಯಾ ಚೇತನ - ಪ್ರಕೃತಿಯ ಸೂಕ್ಷ್ಮ ಸ್ಥೂಲಭಾಗಗಳು ಕಾಲದಪ್ರವಾಹ ಪ್ರವಾಹಿಗಳು, ಪುರಾಣದ ಅರ್ಥ ವಾಕ್ಯ ರಚನೆಗಳು ಕ್ರಮಾನುಸಾರವಾಗಿ ನಿತ್ಯಾನಿತ್ಯಾಚೇತನಗಳೆಂದು ಕರೆಸುತ್ತವೆ.

(೩) ಅನಿತ್ಯಾಚೇತನ ಉತ್ಪತ್ತಿ ನಾಶವುಳ್ಳ ಅಚೇತನ ವಸ್ತುಗಳೆಲ್ಲ ಅನಿತ್ಯವೆಂದು ಕರೆಸುತ್ತವೆ

॥ ಮೋಕ್ಷ ಸಾಧನ ಜ್ಞಾನ ಮತ್ತು ಮೋಕ್ಷ ಸ್ವರೂಪ ವಿಚಾರ ॥

ಮೇಲ್ಕಂಡ ಚೇತನಾ ಚೇತನ ವಸ್ತುಗಳ ಸೃಷ್ಟಿ, ಸ್ಥಿತಿ, ಲಯ, ನೇಮನ, ಜ್ಞಾನಾಜ್ಞಾನ ಬಂಧ ಮೋಕ್ಷಗಳು ಸ್ವತಂತ್ರನಾದ ಪರಮಾತ್ಮನ ಅಧೀನದಲ್ಲಿ ಯಾವಾಗಲೂ ಇರುತ್ತವೆಂಬ ಜ್ಞಾನವುಳ್ಳವರಾದ ದಾಸಜನರೇ ಮೋಕ್ಷಯೋಗ್ಯರು. ಇವರಿಗಾಗುವ ಸ್ವರೂಪಾನಂದಾನುಭವ ರೂಪವಾದ ಮೋಕ್ಷವು ಕೂಡ ತಾರತಮ್ಯಾನುಸಾರವಾಗಿರುವಂತೆ, ಸ್ವರೂಪ ದುಃಖಾನುಭವ ರೂಪವಾದ ಮುಕ್ತಿಯೂ, ಸ್ವರೂಪ ಸುಖ ದುಃಖಾನುಭವ ಮಿಶ್ರ ರೂಪವಾದ ಮುಕ್ತಿಯೂ ಕ್ರಮವಾಗಿ ತಾಮಸ ರಾಜಸ ಜೀವರಿಗೆ ತಾರತಮ್ಯಾನುಸಾರವಾಗಿಯೇ ಇರುತ್ತವೆ. ಮುಕ್ತರೂ ಸ್ವರೂಪ ಧರ್ಮಗಳಿಂದ ತರತಮ ಭಾವವುಳ್ಳವರು ಅಂದರೆ ನೀಚೋಚ್ಚ ಭಾವವುಳ್ಳವರು. ತಾರತಮ್ಯವು ಜ್ಞಾನಾನಂದಾದಿ ಗುಣಗಳ ವಿವಕ್ಷೆಯಿಂದಲೇವೆ ಅನಾದಿ ಸಿದ್ಧವಾಗಿದೆ. ಜ್ಞಾನಾನಂದಾದಿ ಅನುಭವಗಳಿಗೆ ಅಧಿಕಾರಿಗಳಾದ ಜೀವರಲ್ಲಿಯೇ ತಾರತಮ್ಯವಿದೆ. ಎಂದು ಆನಂದ ತಾರತಮ್ಯ ಶ್ರುತಿಯಲ್ಲಿ ಹೇಳಿರುತ್ತಾರೆ.

ಅಚೇತನ ತಾರತಮ್ಯ ಖಂಡನ ವಿಚಾರ

ಎಲ್ಲೆಲ್ಲಿ ತಾರತಮ್ಯ ವಿರುತ್ತದೆಯೋ ಅಲ್ಲಲ್ಲಿ ಪರಸ್ಪರ ಭೇದವಿದೆ. ಭೇದವು ಮಾತ್ರ ತಾರತಮ್ಯವಿಲ್ಲದ ಸ್ಥಳಗಳಲ್ಲಿಯೂ ಇರುವದರಿಂದ ವ್ಯಾಪಕವೆಂದು ಕರೆಸುತ್ತದೆ. ತಾರತಮ್ಯವು ಭೇದವಿದ್ದ ಕೆಲವು ಸ್ಥಳಗಳಲ್ಲಿ ಮಾತ್ರ ಇರುವದು. ಭೇದವಿಲ್ಲದ ಸ್ಥಳದಲ್ಲಿ ಎಂದೂ ಇರುವದಿಲ್ಲ ಇದರಿಂದ ತಾರತಮ್ಯವು ವ್ಯಾಪ್ಯವೆಂದು ಕರೆಸುವದು. ತಾರತಮ್ಯ ಮತ್ತು ಭೇದಗಳಿಗೆ ವ್ಯಾಪ್ಯವ್ಯಾಪಕ ಭಾವವು ನಿಯತವಾಗಿರುತ್ತದೆ ಮತ್ತು ಮುಕ್ತ ಬ್ರಹ್ಮರಲ್ಲಿ ಭೇದವಿದ್ದಾಗ್ಯೂ ತಾರತಮ್ಯವಿಲ್ಲ ಅಮುಕ್ತರಾದ ಶೇಷ ಗರುಡರಿಗೆ ಭೇದವಿದ್ದಾಗ್ಯೂ ತಾರತಮ್ಯವಿಲ್ಲ ಇದರಂತೆ ಜಡಗಳಲ್ಲಿ ಭೇದವಿದ್ದರೂ ತಾರತಮ್ಯವಿಲ್ಲ,

## ಚೇತನ ನೈಸರ್ಗಿಕ ತಾರತಮ್ಯ ವಿಚಾರ

ಜೀವಸ್ವರೂಪ ತಾರತಮ್ಯವು ಸ್ವಾಭಾವಿಕ ಶತೋತ್ತರ ಕ್ರಮದಿಂದ ಭಗವತ್ ಸಂಕಲ್ಪಾನುಸಾರ ವಾಗಿರುತ್ತದೆ. ಇದಕ್ಕೆ ದೇಶ ಕಾಲ ಪ್ರಕೃತಿ ಗಳಿಂದ ಎಂದೂ ವ್ಯಾಹತಿ ಯಾಗುವದಿಲ್ಲ ಆದರೆ ಸಂಸಾರ ದಶೆಯಲ್ಲಿ ದೇಶ ಕಾಲ ತ್ರಿಗುಣ ನಿಮಿತ್ತಕವಾಗಿಯೂ, ಆವೇಶ ನಿಮಿತ್ತಕ ವಾಗಿಯೂ, ವ್ಯತ್ಯಸ್ತವಾಗಿ ತೋರಬಹುದು. ಈ ವ್ಯತ್ಯಾಸವು ಅನಿತ್ಯವಾದದ್ದು. ಮುಕ್ತಜೀವರಲ್ಲಿ ತಾರತಮ್ಯ ನಿಜಸ್ಥಿತಿಯನ್ನು ಕಾಂಬುವಂತೆ ಅಮುಕ್ತ ಜೀವರಲ್ಲಿ ಕಾಣಲಾಗದು. ಅಧಮ ಸ್ವರೂಪರಾದ ಜೀವರುಗಳಲ್ಲಿ ಸೋತ್ತಮ ದೇವತೆಗಳ ಆವೇಶ ಬಲದಿಂದ ತಾತ್ಕಾಲಿಕ ಉತ್ತಮತ್ವವು ಅಮುಕ್ತ ದಶೆಯಲ್ಲಿ ತೋರಿದಾಗ್ಯೂ ವ್ಯಕ್ತಿಯಾದ ಮೇಲೆ ದೇವತಾವೇಶ ವಿಲ್ಲದೆ, ನಿಜಯೋಗ್ಯತೆಯಿಂದಿರುತ್ತಾರೆ. ಕರ್ಮಜ ದೇವತೆಗಳಿಗೆ ಸಮಾನರಾದ ಪ್ರಹ್ಲಾದರಾಯರು ಶ್ರೀನಾರದರ ಅನುಗ್ರಹದಿಂದ ಶ್ರೀವಾಯುದೇವರ ಆವೇಶವುಳ್ಳವರಾಗಿ ಪ್ರಧಾನರಾಗಿ ಭೃಗುಋಷಿಗಳಿಗೆ ಸಮಾನರೆಂದು ಕರಿಸಿದಾಗ್ಯೂ, ಅದು ಅಮುಕ್ತದಶೆಯಲ್ಲಿಯೇ ಹೊರತು ಮುಕ್ತದೆಶೆಯಲ್ಲಿಲ್ಲವೆಂದು. ಶಾಸ್ತ್ರದಲ್ಲಿ ಹೇಳಿರುತ್ತದೆ ತಾರತಮ್ಯದ ನಿಜಸ್ಥಿತಿ ಗನುಸಾರವಾಗಿ ಬ್ರಹ್ಮಾಂಡದ ಹೊರಗೆ ಅನಿರುದ್ಧನಾಮಕ ಪರಮಾತ್ಮನಿಂದ ಮಾಡಲ್ಪಡುವ ಸೂಕ್ಷ್ಮ ಸೃಷ್ಟಿಯಂತೆ ಬ್ರಹ್ಮಾಂಡದೊಳಗಿನ ಪಾದ್ಮ ಕಲ್ಪದ ಸೃಷ್ಟಿಯೂಕೂಡ ತಾರತಮ್ಯ ಜ್ಞಾಪಕವೆಂದು ಶ್ರೀಮದಾನಂದ ತೀರ್ಥ ಭಗವತ್ಪಾದರು ಶ್ರೀಮತ್ತಾತ್ಪರ್ಯ ನಿರ್ಣಯದಲ್ಲಿ ಸೂಚಿಸಿರುತ್ತಾರೆ. ಶೇಷ ಗರುಡರ ಮಾರ್ಗ ಲಯಕ್ರಮವೂ ತಾರತಮ್ಯ ಜ್ಞಾಪಕವು. ಆದರೆ ಪದ್ಮ ಕಲ್ಪದಂತೆ ವರಾಹಕಲ್ಪದ ಸೃಷ್ಟಿಯು ತಾರತಮ್ಯ ಜ್ಞಾಪಕವಲ್ಲ

# X

## ತಾರತಮ್ಯ ಜ್ಞಾನಕ್ಕೆ ಮೋಕ್ಷಸಾಧನ ವಿಚಾರ

ಮೇಲ್ಕಂಡ ಜೀವರ ಸ್ವರೂಪ ತಾರತಮ್ಯ ಜ್ಞಾನವು ಮೋಕ್ಷಕ್ಕೆ ಹೇಗೆ ಸಾಧನ ವೆಂಬ ಪ್ರಶ್ನೆಯು ಉದ್ಭವಿಸಬಹುದು ಇದಕ್ಕೆ ಸಮಂಜಸವಾಗಿ ಉತ್ತರವು ದೊರೆಯಬೇಕಾದರೆ ಸಚ್ಛಾಸ್ತ್ರದಲ್ಲಿದ್ದ ವಿಷಯಗಳನ್ನು ವಿಮರ್ಶಿಸಬೇಕು, ಪ್ರತಿಯೊಬ್ಬ ಮುಮುಕ್ಷುವಿಗೆ, ಪರಮಾತ್ಮನ ಪ್ರಸಾದದಿಂದಲೇ ಮೋಕ್ಷವೆಂಬುದು, ನಿರ್ವಿವಾದವಷ್ಟೆ! ಶ್ರೀಶಪ್ರಸಾದವು ಅಧಿಕಾರಿಗಳ ಭಕ್ತ್ಯನುಗುಣವಾಗಿರುವದು; ಭಕ್ತಿಯು ಭಗವಂತನಿಗೆ ಅತಿ ಪ್ರೀತ್ಯಾಸ್ಪದರಾದ ಬ್ರಹ್ಮಾದಿ ಅನಾದಿ ಭಕ್ತರಲ್ಲಿ ತಾರತಮ್ಯಾನುಸಾರ ಇರುವದಲ್ಲದೆ, ಸರ್ವೋತ್ತಮನಾದ ಶ್ರೀಹರಿಯಲ್ಲಿಯೂ ಇದ್ದರೆ ಅದು ನಿರ್ಮಾಯಿಕ ಭಕ್ತಿಯೆನಿಸಿ ಸಂಪೂರ್ಣ ಫಲಕ್ಕೆ ಕಾರಣ ವಾಗುತ್ತದೆ.

ತಾರತಮ್ಯಂ ತತೋಜ್ಞೇಯಂ ಸರ್ವೋಚ್ಚತ್ವಂ ಹರೇಃಸದಾ ॥
ಏತದ್ವಿನಾ ನಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ ॥ ೧ ॥

ಭಕ್ತರಲ್ಲಿಮಾತ್ರ ತಾರತಮ್ಯ ಜ್ಞಾನವಿಲ್ಲದೆ ಭಕ್ತಿಯನ್ನುಮಾಡಿ ಭಗವಂತನಲ್ಲಿ ಮಾಡದಿದ್ದರೂ, ಭಗವಂತನಲ್ಲಿಮಾಡಿ ಭಕ್ತರಲ್ಲಿಮಾಡದಿದ್ದರೂ ಅದುಕೂಡ ಸಮಾಯಿಕ ಭಕ್ತಿಯೆನಿಸಿ ಸಂಪೂರ್ಣಫಲಕ್ಕೆ ಕಾರಣ ವಾಗುವದಿಲ್ಲ. ಭಕ್ತಿಯೆಂದರೆ ಯಥಾರ್ಥ ಜ್ಞಾನ ಸ್ನೇಹ ಭಗವಂತನ ಮಹಾತ್ಮೆಯ ಯಥಾರ್ಥ ಜ್ಞಾನವೂ ಮತ್ತು ತಾರತಮ್ಯಾನುಸಾರವಾಗಿರುವ ಭಗವದ್ಭಕ್ತರ ಸ್ವರೂಪ ಮಹಾತ್ಮೆಯ ಯಥಾರ್ಥ ಜ್ಞಾನವೂ, ಆಗದ ವಿನಾ ಶ್ರೀವಿಷ್ಣು ವೈಷ್ಣವರ ಚರಣಗಳಲ್ಲಿ ನಿರ್ಮಲ ಸ್ನೇಹವು ಉಂಟಾಗಲಾರದು. ಅನಾದಿ ಭಕ್ತರಾದ ಸೋತ್ತಮ ಬ್ರಹ್ಮಾದಿಜ್ಞಾನಿಗಳ ಪ್ರಸಾದ ಪೂರ್ವಕ ಉಪದೇಶವಾಗದಹೊರತು ಬ್ರಹ್ಮಜ್ಞಾನವು ದೊರೆಯಲಾರದು. ಉಪದೇಶಕರಾದ ಸೋತ್ತಮ ಜ್ಞಾನಿಗಳ ಪ್ರಸನ್ನತೆಯು ಅವರಲ್ಲಿ ಭಕ್ತಿಯನ್ನು ಮಾಡಿದರೇನೆ ಆಗು

ತ್ತದೆ. ಅವರ ಸದ್ಗುಣಗಳ ಮಹಿಮೆಯು ತಾರತಮ್ಯದ ನಿಜಸ್ಥಿತಿಯನ್ನು ಅರಿತು, ಅವರಲ್ಲಿ ನಿರ್ವ್ಯಾಜ್ಯವಾದ ಪ್ರೇಮವನ್ನು ಬೆಳಸುವದೇ ಭಕ್ತಿಯಷ್ಟೆ? ಈವಿಧವಾದ ಭಕ್ತಿಯು ಅವರವರ ಚರಣ ಸೇವೆ ದೊರೆಯದೆ ದೊರೆಯಲಾರದು. ಸ್ವೋತ್ತಮರ ನಿಜಸ್ಥಿತಿಯು ವ್ಯತ್ಯಾಸಜ್ಞಾನದಿಂದವರ ಸೇವೆಯನ್ನು ಕೈಗೊಂಡು ಬ್ರಹ್ಮಜ್ಞಾನಕ್ಕೆ ಯತ್ನಿಸುವ ಅಧಿಕಾರಿಗಳಿಗೆ ಸನ್ಮಾರ್ಗದಿಂದ ಭ್ರಷ್ಟತ್ವ ಉಂಟಾಗುತ್ತದೆಂದು “ ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ॥ ಕ್ರಿಯತೇ ಯೇನ ದೇವೋಽಪಿ ಸ್ವಪದಾತ್ ಭ್ರಶ್ಯತೇ ಪುಮಾನ್ ” ॥ ಇತಿಬ್ರಾಹ್ಮೇ ॥ ಎಂಬ ಪ್ರಮಾಣದಿಂದ ಸಿದ್ಧವಾಗುತ್ತದೆ. ಸಾಧನ ಮಾಡತಕ್ಕ ಅಧಿಕಾರಿ ಜೀವನು, ತನ್ನ ನಿಜ ಸ್ವರೂಪ ವ್ಯಾವದು? ತನ್ನ ಸ್ವರೂಪಕ್ಕಿಂತಧಮರಾರು? ಸಮರಾರು? ಉತ್ತಮರಾರು? ಎಂಬದನ್ನರಿತು “ ಮಹತಾಂ ಬಹುಮಾನೇನ ಹೀನಾನಾಮನುಕಂಪಯಾ । ಮೈತ್ರ್ಯಾಂ ಚೈವಾತ್ಮತುಲ್ಯೇಷು ॥ ” ಎಂಬ ಪ್ರಮಾಣಾನುಸಾರ ನಡೆಸುಕೊಳ್ಳ ಬೇಕಾದದ್ದು ಅವಶ್ಯಕ

“ ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ ।
ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ । ”

ಎಂಬ ಪ್ರಮಾಣಾನುಸಾರ ಭಗವಂತನ ವಿಶೇಷ ಪ್ರೀತಿ ಪಾತ್ರರಾದ ವಿಷ್ಣುಭಕ್ತರು ಎನಗೆ ನಿಜಬಂಧುಗಳೆಂಬೊ ಅನುಸಂಧಾನ ಪೂರ್ವಕವಾದ, ಸೇವೆಯನ್ನು ಕೈಗೊಂಡಲ್ಲಿ ಜ್ಞಾನಿಗಳ ಚರಣಭಕ್ತಿಯನ್ನುಂಟುಮಾಡಿ ಅವರ ಪ್ರಸನ್ನತೆಯನ್ನು ತಂದುಕೊಡುತ್ತದೆ. ಪ್ರಸನ್ನರಾದ ಮಹಾನುಭಾವರಿಂದ ಮಾಡಲ್ಪಡುವ ಯೋಗ್ಯಕಾಲೀನ ಉಪದೇಶವೂ ಹಾಗು ಅವರ ಪರಮಾನುಗ್ರಹವೂ, ನಿರ್ವಿಘ್ನ ಸಾಧನಗಳನ್ನು ಮಾಡಿಸಿ ಶ್ರೀಬಿಂಬರೂಪಿ ಪರಮಾತ್ಮನ ವಿಜ್ಞಾನ, ಭಕ್ತಿ, ಪ್ರಸಾದಗಳು ಕೈಗೂಡುವಂತೆ ಮುಮುಕ್ಷುಗಳಿಗೆ ಮಾಡುತ್ತವೆ ಇದರಿಂದ ತಾರತಮ್ಯ ಜ್ಞಾನವು ಮೋಕ್ಷ ಸಾಧಕವಾದ ಪ್ರಯುಕ್ತ ಇದನ್ನು ತಿಳಿಯುವ

ವಿಷಯದಲ್ಲಿ ಶಾಸ್ತ್ರಕಾರರಿಗೆ ಮುಖ್ಯ ತಾತ್ಪರ್ಯ ವುಂಟೆಂದು, ಶ್ರೀ ಮಹಾನಂದ ತೀರ್ಥ ಭಗವತ್ಪಾದರು " ಭಾರತಸ್ಯ ಪರಿಜ್ಞಾನೆ ಮಹಾತಾತ್ಪರ್ಯಮಿಷ್ಯತೆ " ಎಂದು ಪ್ರತಿಪಾದಿಸುತ್ತಾರೆ.

ಆಮ್ನಾಯೈಕ ವೇದ್ಯನು ಯೆಂದರೆ ಶಾಸ್ತ್ರೈಕ ವೇದ್ಯನೆಂದರ್ಥ ಶಾಸ್ತ್ರೈಕ ವೇದ್ಯನಾದ ಶ್ರೀ ಹರಿಯಲ್ಲಿ, ಭಕ್ತಿಯನ್ನು ಮಾಡುವ ದಾಸರಿಗೆ ಪ್ರಸನ್ನನಾದ ಸ್ವಾಮಿಯು ಮುಕ್ತಿಯನ್ನು ನೀಡುವನು. ದಾಸರಾದವರು, ತಮಗೆ ಈಶನಾದ ಶ್ರೀವರನಿಂದ ಕಾಲಕ್ಕೊದಗುವ ಉಪಕಾರವನ್ನು, ಸತ್ಯವಾಗಿ ತಿಳಿದು ಕೃತಜ್ಞರಾದಲ್ಲಿ ಆತನ ಪ್ರೀತಿಪಾತ್ರರಾಗುತ್ತಾರೆ ನಿರಂತರದಲ್ಲಿ ಶ್ರೀಹರಿಯಾಧೀನವಾದ ರಮಾದೇವಿಯರಧಿಕಾರಕ್ಕೊಳಪಟ್ಟಿರುವ ಅಭಿಮಾನಾಸ್ಪದವಾದ ವಸ್ತುಗಳಿದು ೧ ಜೀವರು ೨ ವೇದವರ್ಣಗಳು ೩ ಅವ್ಯಾಕೃತಾಕಾಶವೆಂಬ ವಿಶಾಲವಾದ ದೇಶ ೪ ಕಾಲ ೫ ತ್ರಿಗುಣಾತ್ಮಕವಾದ ಪ್ರಕೃತಿಯು ಹೀಗೆ ಪಂಚವಿಧ ಶ್ರೀಹರಿಯು, ಸತ್ಯನು, ಈತನ ಅಪ್ಪದೇಕ ಪ್ರಕಾರವಾದ ಪೂರ್ಣ ಮಹಿಮೆಯು; ಸತ್ಯವು, ಈತನ ಜ್ಞಾನಾನಂದಾದಿ ಗುಣ ರೂಪಗಳು, ಸತ್ಯ ಈತನ ಮಡದಿ ಲಕ್ಷ್ಮೀದೇವಿ ಸತ್ಯ, ಈತನ ನಿವಾಸಲೋಕವು ಸತ್ಯವಾದದ್ದು ಈತನ ಆನಂದೋದ್ರೇಕವಾದ ವಿಹಾರವು ಸತ್ಯ ಶ್ರೀದೇವಿಯೊಡಗೂಡಿ ಶ್ರೀವರನು ಜೀವರ ನಿವಾಸಾರ್ಥವಾಗಿ, ದೇಶವನ್ನು ನಿರ್ಮಿಸಿದನು ದೇಶನಿವಾಸಿಗಳಿಗೆ ಸಾಧನಸಾಮಗ್ರಿಗಳನ್ನು ಪ್ರಕೃತಿಯ ಮೂರುಗುಣಗಳ ರೀತಿಯಿಂದ ನಿರ್ಮಾಣಗೈಸಿ, ಸಮಯಾಸಮಯ ಜ್ಞಾನಾರ್ಥವಾಗಿ, ಅನಾದಿ ನಿತ್ಯ ಪ್ರವಾಹ ರೂಪವಾದ ಕಾಲದಿಂದ; ಕ್ಷಣಲವಾದಿ ಕಾಲವನ್ನು ನಿರ್ಮಾಣಮಾಡಿ, ಇವುಗಳ ಸದುಪಯೋಗವನ್ನು ತಿಳಿಸಿಕೊಡುವ ಆಗಮಗಳನ್ನು ಉಪದೇಶಾರ್ಥ ಕರದಲ್ಲಿ ಧರಿಸಿಹ ಶ್ರೀವರಹಯವದನನ ಎಂದಿಗೂ ಇಂದಿರಾದೇವಿಗೆ ದುರ್ಲಭವಾದ ಕೈವಲ್ಯದ ನಿಜಸ್ಥಿತಿಯನ್ನರಿಯದ ಮಂದ ಮಾನವರು

ಅವನ್ಯೈಕ್ಯಸಾಮ್ಯವನ್ನು ಹೊಂದುವೆವೆಂದು, ಮನ ಬಂದಂತೆ ಅಂದರೆ ಇಂದಿರೇಶನ ಮಹಿಮೆಗೆ ಕುಂದಾಗುವದೇನು ? ಆದರೆ ಅಯೋಗ್ಯ ಮಂದ ಮಾನವರ ಸಹವಾಸ ಸಂಬಂಧದಿಂದ, ಹೊಲೆಗೆಡುವ ತಮ್ಮ ದಾಸ ಜನರ ಮಾನಸ ಸ್ಥಿತಿಗಳನ್ನು ಹಸನಗೈಸಲು ಶ್ರೀಮದಾನಂದ ತೀರ್ಥ ಭಗವತ್ಪಾದರು, ಭರತ ಭೂಮಿಗೆ ಬಂದು ಯಥಾರ್ಥ ಜ್ಞಾನವು ಮುಕ್ತಿಗೆ ಸಾಧನವು, ಅಯಥಾರ್ಥ ಜ್ಞಾನವೂ ಸಂಶಯ ಜ್ಞಾನವೂ ತಮೋ ಮಂದಿರದ ದಾರಿಯನ್ನು ಹೊಂದಿಸುವವು, ಎಂದು ಸ್ಫುಟವಾಗಿ ತಿಳಿಸುವದಕ್ಕೋಸುಗ ಶ್ರುತಿ, ಸ್ಮೃತಿ, ಸಮ್ಮತವಾದ ಅನಾದಿ ನಿತ್ಯವಾದಭೇದ ಮತವನ್ನು ಪುನಃ ಸ್ಥಾಪಿಸಿದರು ಈಸನ್ಮತಕ್ಕೆ ವಿರೋಧಿಯಾದ ಚೇತನೈಕ್ಯವಾದ ಮತದಲ್ಲಿ ಪ್ರವೇಶಿಸಲು, ಅವಕಾಶದೊರೆಯದೆ, ತಾರತಮ್ಯ ಭೇದಗಳು. ವಿಶಿಷ್ಟಾದ್ವೈತ ಮತವನ್ನು ಹೊಕ್ಕು ನೋಡಲಾಗಿ "ಚೇತನಾಚೇತನ ಜಗತ್ ಸತ್ಯ ಈ ಜಗತ್ತಿಗೆ ಈಶನು ಸತ್ಯ ಜೀವರುಗಳಿಗೆ ಸಂಸಾರದಲ್ಲಿ ಭೇಧವುಂಟು ಮುಕ್ತರಾದಮೇಲೆ ಭಿನ್ನರಾದ ಜೀವರುಗಳು ಈಶನಿಗೆ ಸಮರಾಗುತ್ತಾರೆ" ಎಂಬೀ ಹೇಸಿದೋಷವುಳ್ಳ ಮತದಿಂದ, ಹೊರಹೊರಟು, ಶ್ರೀಮದಾನಂದ ತೀರ್ಥ ಭಗವತ್ಪಾದರ ಸನ್ಮತವೆಂಬ ಮಂದಿರವನ್ನು ಪ್ರವೇಶಿಸದವು. ಈಮತದಲ್ಲಿ, ಅವ್ಯಾಕೃತಾಕಾಶದಂತೆ, ವಿಶಾಲವಾದ ದೇಶವು ಎಲ್ಲಿ ನೋಡಿದರಲ್ಲಿ ಶರಿಯಂತೆ, ಗುಣಿಸ ಭಗವನ್ನಾಮವೆಂದು, ಕರೆಸುವ ವೇದವರ್ಣಗಳು, ಕಾಲಾತೀತ ತ್ರಿಗುಣಾತೀತನಾದ ಶ್ರೀವರನಿಗೆ ಪ್ರತಿಬಿಂಬರಾದ ಜೀವಿಗಳೆಂಬ ಶಿಶುಗಳು ಸ್ವಾಮಿಯ ಅನುಜ್ಞೆಯಿಂದ, ತನ್ನ ಶಿಶುಗಳ ಲಾಲನೆ ಪಾಲನೆಯನ್ನು ದೇವಿಯು ಮಾಡುತ್ತಿರುವಳು ಈ ಮೇಲ್ಕಂಡ ವೈಭವಗಳನ್ನು ಕಂಡು ಮುಕ್ತಸ್ಥಾನದಲ್ಲಿ ಮುಕ್ತರಿರುವಂತೆ, ಇತರ ಮತಗಳ ಕುರಿತು, ಪುನರಾವರ್ತಿಸುವ ಅಪೇಕ್ಷೆಯಿಲ್ಲದೆ, ತಾರತಮ್ಯಗಳು ಈ ಮತದಲ್ಲಿ ನಿಶ್ಯಂಕೆಯಿಂದಿರ

ಹೊಸ್ಕಪ್ರಿ. ಕೆಳಗೆ ಬರೆದಂತೆ, ಚೇತನರ ತಾರತಮ್ಯ ಸ್ಥಿತಿಯನ್ನು ತಿಳಿಯತಕ್ಕದ್ದು.

೧ ಶ್ರೀಹರಿ ಸರ್ವೋತ್ತಮ

೨ ಪತಿಯಾಧೀನಳಾದ ನಿತ್ಯಮುಕ್ತ ರಮಾದೇವಿ

೩ ಬ್ರಹ್ಮ, ವಾಯುದೇವರು ಋಜುಗಳು,

೪ ಸರಸ್ವತಿ, ಭಾರತೀದೇವಿಯರು ಋಜು ಪತ್ನಿಯರು.

೫ ಶೇಷ ದೇವರು, ಗರುಡದೇವರು, ರುದ್ರದೇವರು (ಮಹದೇವ)

೬ ಜಾಂಬವತಿ, ಕಾಳಿಂದೀ, ನೀಲಾ, ಭದ್ರಾ, ಲಕ್ಷ್ಮಣಾ, ಮಿತ್ರವಿಂದಾ ( ಶ್ರೀ ಕೃಷ್ಣನ ಷಣ್ಮಹಿಷಿಯರು )

೭ ವಾರುಣೀದೇವಿ, ಸೌಪರ್ಣೀದೇವಿ ಪಾರ್ವತಿದೇವಿ;

೮ ಇಂದ್ರದೇವರು, ಕಾಮದೇವರು,

೯ ಅಹಂಕಾರಿಕ ಪ್ರಾಣದೇವರು

೧೦ ಸ್ವಾಯಂಭುವ ಮನು ದಕ್ಷಪ್ರಜಾಪತಿ, ಬೃಹಸ್ಪತಿ, ಅನಿರುದ್ಧ ಶಚೀ, ರತೀ,

೧೧ ಪ್ರವಹ ವಾಯುದೇವರು, ( ನಾಲ್ವತ್ತೇಳು ಮಂದಿ ವಾಯು ಪುತ್ರರಿಗೆ ಅಧಿಪತಿಗಳು )

೧೨ ಸೂರ್ಯ, ಚಂದ್ರ ಯಮ, ಶತರೂಪಾದೇವಿಯರು (ಮನುಪತ್ನಿ)

೧೩ ವರುಣದೇವರು

೧೪ ನಾರದರು; (ದೇವಋಷಿಗಳು)

೧೫ ಅಗ್ನಿದೇವರು ಪ್ರಸೂತಿದೇವಿ (ದಕ್ಷಪತ್ನಿ) ಭೃಗು ಋಷಿಗಳು ಪ್ರಹ್ಲಾದರಾಯರು.

೧೬ ಮರೀಚಿ, ಅತ್ರಿ, ಅಂಗೀರಸ ಪುಲಸ್ತ್ಯ ಪುಲಹ, ಕ್ರತು, ವಶಿಷ್ಟ ವಿಶ್ವಾಮಿತ್ರ, ವೈವಸ್ವತಮನು.

೧೭ ಮಿತ್ರನಾಮಕಸೂರ್ಯ, ನಿರುಋತಿ, ಪ್ರಾವಹಿ ( ಪ್ರವಹ

ವಾಯುವಿನ ಪತ್ನಿ ) ತಾರಾ ( ಬೃಹಸ್ಪತಿಯ ಪತ್ನಿ )

೧೮ ಗಣಪತಿ, ವಿಷ್ವಕ್ಸೇನ, ಕುಬೇರ, ಅಶ್ವಿನಿದೇವತೆಗಳು; ಮತ್ತು ೮೫ ಜನ ಶೇಷಶತಸ್ಥ ದೇವತೆಗಳು.

೧೯ ಕರ್ಮಜ ದೇವತೆಗಳು,

೨೦ ಗಂಗಾ, ಸಂಜ್ಞಾ, ರೋಹಿಣೀ, ಶ್ಯಾಮಲಾ, ಉಷಾ, ಪರ್ಜನ್ಯ

೨೧ ಅನಾಖ್ಯಾತ ಕೂರ್ಮಾದಿ ಸುರರು.

೨೨ ಸ್ವಾಹಾದೇವಿ, (ಅಗ್ನಿಪತ್ನಿ)

೨೩ ಬುಧ ( ಜಲಾಭಿಮಾನಿ )

೨೪ ಉಷಾದೇವಿ, ದೇವಕೀದೇವಿ, ಯಶೋದಾದೇವಿ,

೨೫ ಶನೈಶ್ಚರ, ಧರಾದೇವಿ (ಧರಣಿದೇವಿ)

೨೬ ಕರ್ಮಾಭಿಮಾನಿ ಪುಷ್ಕರ,

೨೭ ಅಜಾನಜದೇವತೆಗಳು, ಶತೋನಶತಕೋಟಿಋಷಿಗಳು ಪಿತೃಗಳು,

೨೮ ಚಿರಪಿತೃಗಳು.

೨೯ ದೇವಗಂಧರ್ವರು

೩೦ ಮನುಷ್ಯ ಗಂಧರ್ವರು;

೩೧ ಮನುಷ್ಯರಾಜರು;

೩೨ ಮನುಷ್ಯೋತ್ತಮಾದಿ ತೃಣಜೀವರು;

# ಹರಿಕಥಾಮೃತಸಾರ

ಶ್ರೀಕಮಲಾಪತಿ ದಾಸರವ್ಯಾಖ್ಯಾ ಸಹಿತವಾದ ಛಾಪಾ ಪ್ರತಿಯಲ್ಲಿರುವ ಸಂಧಿ ಪದ್ಯಗಳು

| ಸಂಧಿ | | ಪದ್ಯ | ಸಂಧಿ | | ಪದ್ಯ |
|---|---|---|---|---|---|
| ೨೯ | – | ೭ | ೨೭ | – | ೧೭ |

| | | | | | |
|---|---|---|---|---|---|
| ೨೬ | — | ೩-೩೦-೩೧ | ೨೨ | — | ೫೩ |
| ೧೫ | — | ೨೧ | ೧೭ | — | ೨೨; ೭೩ |
| ೨೯ | — | ೧೩ | ೫ | — | ೩೫ |
| ೭ | — | ೨೩ | | | |
| ೩ನೇ | | ೨೩ ರಿಂದ ೨೯ ರವರೆಗೆ ಏಳು ಪದ್ಯಗಳು. | | | |

ಈ ಮೇಲೆ ಹೇಳಿರುವ ಪದ್ಯಗಳೆಲ್ಲ ತಾರತಮ್ಯದ ಉಪೋದ್ಘಾತದ ಮೂಲಾಧಾರ ಪ್ರಮಾಣ ವಾಗಿರುತ್ತವೆ.

ಈ ಪದ್ಯಗಳನ್ನು ಎಲ್ಲರೂ ವಿಮರ್ಶಿಸಿ; ಹೆಚ್ಚು ಪುಷ್ಟೀಕರಣ ಮಾಡಿಕೊಳ್ಳ ಬಹು.

## ಉಪಸಂಹಾರವು

ಶ್ರೀ ಜಗನ್ನಾಥ ದಾಸರಾಯರು ಶ್ರೀಮದ್ ಹರಿಕಥಾಮೃತ ಸಾರವೆಂಬ ದಿವ್ಯಗ್ರಂಥದಲ್ಲಿ, ಐದುಸಂಧಿಗಳಿಂದಿ ಪರಮಾದರ ಪೂರ್ವಕ ವಾಗಿ, ಮೂಲ ಶಾಸ್ತ್ರ ಸಾಗರದ ಅಮೃತಸಾರ ರೂಪವಾದ ತಾರತಮ್ಯ ಪ್ರಮೇಯಗಳನ್ನೇ ತಿಳಿಸಿರುತ್ತಾರೆ. ಇವರಿಗೆ ವಿದ್ಯಾಗುರುಗಳಾದ ಶ್ರೀಶ್ರೀ ವರದೇಂದ್ರ ತೀರ್ಥ ಶ್ರೀಪಾದಂಗಳವರ ವೃಂದಾವನ ಸನ್ನಿ-ಧಾನ ವುಳ್ಳ ಲಿಂಗಸೂಗೂರೆಂಬ ಊರು; ಶ್ರೀ ಜಗನ್ನಾಥ ದಾಸ ರಾಯರ ಮುಖ್ಯ ಶಿಷ್ಯರಾದ ಶ್ರೀಪ್ರಾಣೇಶ ದಾಸ ರಾಯರ ಮತ್ತು ಅವರ ಪ್ರಶಿಷ್ಯರಾದ, ಶ್ರೀಗುರು ಪ್ರಾಣೇಶ ದಾಸ ರಾಯರ ನಿವಾಸ ಸ್ಥಾನ ವಾದ ಕಾರಣ ಮಹಾಕ್ಷೇತ್ರವೆಂದು ಕರೆಸುತ್ತದೆ ಈ ಕ್ಷೇತ್ರ ದಲ್ಲಿ ಶ್ರೀದಾಸ ರಾಯರ ಕಟ್ಟೆ, ಹಾಗು ಪ್ರಾಚೀನ ಶ್ರೀಹರಿದಾಸ ಸಾಹಿತ್ಯ ಗ್ರಂಥಗಳು: ಅದ್ಯಾಪಿ ಸುಸ್ಥಿತಿಯಲ್ಲಿವೆ

ಈ ಕ್ಷೇತ್ರ ನಿವಾಸಿಗಳಾದ ಶ್ರೀಗುರು ಪ್ರಾಣೇಶ ದಾಸ ರಾಯರ ಶಿಷ್ಯ ಪರಂಪರೆಯಲ್ಲಿ, ಸೇರಿದ ಹರಿ ಗುರು ಭಕ್ತಿಪರಾಯಣ

ರಾದ ಮ ರಾ.ರಾ ಹನುಮಂತರಾವ ಗೋಪೀಬಾಳ ಜಹಗೀರದಾರ ವಕೀಲರು, ಗೃಹಸ್ಥ ಧರ್ಮದಿಂದಿದ್ದು, ಲಿಂಗಸೂಗೂರು ಕ್ಷೇತ್ರದಲ್ಲಿ ಸನ್ನಿಹಿತರಾದ ದಾಸ ಜನ ಪ್ರಸನ್ನ ಪ್ರಾಣೇಶ ವಿಠ್ಠಲರ ಪ್ರಸಾದದಿಂದ ಸುಮಾರು ಇಪ್ಪತ್ತೈದು ವರುಷಗಳಿಂದ ಅತ್ಯಪೂರ್ವ ದಾಸ ಸಾಹಿತ್ಯ ಗ್ರಂಥಗಳನ್ನು ಬಹು ಪರಿಶ್ರಮದಿಂದ ಮಧುಕರ ರಾಜನು ಮಧುಸಾರ ವನ್ನು ಸಂಗ್ರಹಿಸಿದಂತೆ, ಸಂಗ್ರಹಿಸಿ ಸಜ್ಜನರ ಉಪಯೋಗಕ್ಕಾಗಿ, ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲ ವೆಂಬ ನೂತನವಾಗಿ ಸ್ಥಾಪಿಸಿರುವ ಸಂಸ್ಥೆಗೆ, ಸಮರ್ಪಿಸಿರುವದನ್ನು ಕೇಳಿ; ನಮಗೆ ತುಂಬಾ ಸಂತೋಷವಾಗಿದೆ, ಈ ಮಂಡಲದಿಂದ, ತಾರತಮ್ಯ ಪ್ರಕರಣವನ್ನು ಪ್ರಕಟಿಸುವದು, ವಿಶೇಷ ಸ್ತುತ್ಯ ಮತ್ತು ಅಭಿನಂದನೀಯ ವಾಗಿರುವ ದಲ್ಲದೆ, “ ತಾರತಮ್ಯ ಪರಿಜ್ಞಾನೇ ಮಹಾ ತಾತ್ಪರ್ಯ ಮಿಷ್ಯತೆ ” ಎಂಬ ಶ್ರೀಮದ್ಭಗವತ್ಪಾದರ ತಾತ್ಪರ್ಯಾರ್ಥವನ್ನು ಅನುಸರಿಸಿರುವದು

ನೀಚೋಚ್ಚ ಭಾವಂ ಸತತಂ ಪ್ರಪನ್ನೈಃ ಭಾವೀರ ಶರ್ವೇಂದ್ರ
ಮುಖ್ಯೈಃ ಸುರೇಂದ್ರೈಃ ॥ ಸಮಾಜ್ಯಮಾನಂ ಭಜತಾಮಭೀಷ್ಟ
ಪ್ರದಂ ರಮಾ ಪ್ರಾಣ ಪತಿಂ ಭಜೇಹಂ ॥

೫ ನೇ ರೋಡು
ಚಾಮರಾಜ ಪೇಟೆ
ಬೆಂಗಳೂರು ಸಿಟಿ
ತಾ॥ ೨೫-೧೦-೧೯೪೪ ಇಸ್ವಿ

ಕೃಷ್ಣಾಚಾರ್ಯ ಮಾಯಿಳಗ,
ಶ್ರೀರಾಘವೇಂದ್ರಪುರಂ

ಶ್ರೀ ಗುರುರಾಜೋ ವಿಜಯತೇ

# ವಿಷಯಾನುಕ್ರಮಣಿಕೆ



ಮೇಲಿನ ಭಾಗ

# ತಪ್ಪು ಒಪ್ಪುಗಳ ಪಟ್ಟಿ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨ | ೬ | ನೇಸುಸುತಹ | ನೇಮಿಸುತ್ತಿಹ |
| ೬ | ೨೫ | ಆಕುಜರರಗೆ | ಆಕುವರರಗೆ |
| ೧೯ | ೨೫ | ಪಿಲತ್ತ | ಪಿತ್ತಲ |
| ೨೦ | ೧೪ | ಸೌಷರಣಿ | ಸೌಶರಣಿ |
| ೨೩ | ೪ | ಪೂಪರ | ಪೂಪರು |
| ೨೩ | ೨೩ | ಅಪಂತೆ | ಆಪಂಗೆ |
| ೨೨ | ೧೨ | ಅದಿ | ಆದಿ |
| ೪೮ | ೩ | ಪ್ರಭಲಪಿತ್ತು | ಪ್ರಬಲವಿತ್ತು |
| ೪೨ | ೨೨ | ಬುಲ್ಬಿಸೆ | ಯುಲ್ಲಿಸೆ |
| ೫೦ | ೮ | ಕೊಡವಾ | ಕೊಡುವಾ |
| ೫೩ | ೧೯ | ಕಶಲ | ಕುಶಲ |
| ೫೫ | ೨ | ಸಾಕತ್ಯೇನ | ಸಾಕಲ್ಯೇನ |
| ೬೦ | ೮ | ದರ್ಗಾ | ದುರ್ಗಾ |
| ೬೨ | ೧೩ | ಪೇಲಿ | ಮೋಲಿ |
| ೭೧ | ೧೦ | ಸಸ್ಕೃತ | ಸಂಸ್ಕೃತ |
| ೭೨ | ೧ | ಜವಾತ್ರ | ಜನಾತ್ರ |
| ೭೩ | ೯ | ಪವ್ರ | ಪಮ್ರ |
| ೭೯ | ೧ | ಪಾದಲ್ಲಿ | ಪಾದದಲ್ಲಿ |
| ೮೮ | ೨೧ | ಭೆದ | ಭೇದ |
| [illegible] | [illegible] | [illegible] | [illegible] |



ಶ್ರೀ ವಿಜಯದಾಸರು

*

ಶ್ರೀ ಲಕ್ಷ್ಮೀನರಸಿಂಹ ಪ್ರಸೀದ
ಶ್ರೀ ಗುರುರಾಜೋವಿಜಯತೆ

# ತಾರತಮ್ಯಸಾರ

## ೧ ಉಗಾಭೋಗ

ಸತತ ಗಣನಾಥ ಸಿದ್ಧಿಯನೀವ ಸರ್ವದಲಿ ಮು |
ಕುತಿ ಪಥಕೀವಮನ ಮಹಾರುದ್ರದೇವರು ಭ |
ಕುತಿದಾಯಕಳು ಭಾರತೀದೇವಿ ಯು |
ಶ್ರುತಿಶಾಸ್ತ್ರಗಳಲ್ಲಿ ವನಜಸಂಭವನರಸಿ |
ಸತ್ಕರ್ಮದಲಿ ಸುಜ್ಞಾನಪದವಿಯ |
ನಿತ್ಯ ಪರಿಪಾಲಿಸುವ ಪವಮಾನನೂ ||
ಚಿತ್ತದಲಿ ಆನಂದ ಸುಖವನೀವಳು ರಮಾ ಭ |
ಕುತಜನರೊಡೆಯ ಶ್ರೀ ಪುರಂದರ ವಿಠಲ
ಸತತ ಯಿವರಲಿ ನಿಂತು ಕೃತಿಯ ನಡೆಸುವನು ಕೃಷ್ಣಾ ||೧||

## ೨ ಪದ ರಾಗ ಭೈರವಿ ಛಾಪುತಾಳ

ಶ್ರೀಪತಿಯು ನಮಗೆ ಸಂಪದವೀಯಲಿ |
ವಾಣೀಪತಿಯು ದೀರ್ಘಾಯು, ನೇಮಿಸಲಿ ||ಪಲ್ಲ||
ಸೂರ್ಯ ಬುಧರಿಗಾಗಿ ವಿಷವಕಂಠದಲಿಟ್ಟ |
ಹರನಿತ್ಯ ನಮಗೆ ಸಹಾಯವಾಗಲಿ ||
ನರರೊಳುನ್ನತ ವಾದ ನಿತ್ಯ ಭೋಗಂಗಳ |

ಪುರುಹೂತ ನಮಗೆ ಪೂರ್ಣವ ಮಾಡಲಿ ॥ ೧ ॥
ದಿನದಿನದಲೀ ಪಥ್ಯವಿರಲು ಶ್ರೀಧನ್ವಂತ್ರಿ ।
ಮನಹರುಷ ವಿತ್ತು ತಾ ಮನ್ನಿಸಲಿ ।
ವಿನುತ ಸಿದ್ಧಿಪ್ರದ ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆಲೆಸೇರಲಿ ॥ ೨ ॥
ನಿರುತ ಸಜ್ಞಾನವನು ನೀಸುತ್ತಿಹದೇವ
ಗುರುಗಳಾಶೀರ್ವಾದ ನಮಗಾಗಲಿ
ಪುರಂದರ ವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ॥ ೩ ॥

## ೩ ಪದ ರಾಗ— ಕಾಪಿ ತಾಳ— ರೂಪಕ

ಸತ್ಯಂ ಜಗತಿದು ಪಂಚ ಭೇದವು ನಿತ್ಯ ಸಿರಿಗೋವಿಂದನಾ
ಕೃತ್ಯವರಿತು ತಾರತಮ್ಯದಿ ಕೃಷ್ಣನಂಘ್ರಿಯ(ಕೃಷ್ಣನಧಿಕೇದು)ಸಾರಿರೈ ।ಪ
ಜೀವ ಈಶಗೆ ಭೇದ ಸರ್ವತ್ರ ಜೀವ ಜೀವರ ಭೇದವೂ
ಜೀವಜಡರೊಳ್ ಭೇದಸರ್ವತ್ರ ಜಡಜಡ ಪರಮಾತ್ಮನೂ ॥ ೧ ॥
ಮಾನವೋತ್ತಮರಧಿಕ ಕ್ಷಿತಿಪರು ಮನುಷ್ಯ ದೇವ ಗಂಧರ್ವರೂ
ಆಜಾನು ಪಿತರಾಜಾನುಕರ್ಮಜ ದಾನವಾರಿಸತ್ತ್ವಾತ್ಮರು ॥ ೨ ॥
ಗಣಪಮಿತ್ರರು ಸಪ್ತಋಷಿಗಳು ವಹ್ನಿನಾರದ ವರುಣನೂ
ಧರ್ಮಗೆ ಸಮ ಚಂದ್ರಸೂರ್ಯರು ಶತರೂಪ ಪ್ರವಾಹರೂ ॥ ೩ ॥
ದಕ್ಷಸಮ ಅನಿರುದ್ಧಗುರು ಶಚಿರತಿ ಸ್ವಯಂಭುವರಾರ್ವರೂ
ಪ್ರಾಣಕಿಂತಾ ಅಧಿಕ ಕಾಮನು ಕಿಂಚಿತಧಿಕನು ಇಂದ್ರನೂ ॥ ೪ ॥
ದೇವ ಯಿಂದ್ರಗೆ ಅಧಿಕ ಮಹಾರುದ್ರದೇವರಿಗೆ ಸಮ ಗರುಡನೂ
ಕೇವಲವ್ರಯೀಶೇಷ ರುದ್ರಗೆ ದೇವಿಹೆಚ್ಚು ಸರಸ್ವತೀ । ೫ ।
ವಾಯುವಿಗೆ ಸಮರಿಲ್ಲಜಗದಿ ವಾಯುದೇವರೆ ಬ್ರಹ್ಮರೂ

ವಾಯು ಮುಕ್ತಾ ಕೋಟಿ ಗುಣಗಳಿಂದಧಿಕಶಕ್ತಳು ಶ್ರೀರಮಾ ।೬।
ಅನಂತಾನಂತಗುಣದಿ ಲಕುಮಿಗೆ ಅಧಿಕ ಪುರಂದರ ವಿಠಲನೂ
ಘನರು ಸಮರಾರಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ।.೭।

೪ ಪದ ರಾಗ ಪೂರ್ವಿ ತಾಳ ಆದಿ

ಶರಣುಮಾಡುವೆ ನಿಮಗೆ । ಕರಣ ಶುದ್ಧಿಯಲಿ ।
ಕರುಣವಮಾಡಿ ಯೆನ್ನ ಪರಿಪಾಲಿಸಲಿ ಬೇಕು । ನಿರುತ ಬಿಡದೆ ಮನ ॥
ಸಿರಿ ಹರಿ ಚರಣಕ್ಕೆ । ಎರಗುವಂತೆ ವರ ಭಕುತಿಯಲ್ಲಿ ॥ ಪಲ್ಲ ॥
ಸಿರಿ ಪರಮೇಷ್ಠಿ ವಾಯು । ಸರಸ್ವತೀ ಭಾರತೀ । ಗರುಡ ಉರಗ ಯೀಶ ।
ಹರಿ ಸತಿಯರು ಮೂ । ರೆರಡು ಜನರು ಆ । ತರುವಾಯ ಸೌಪರ್ಣಿ ।
ವರವಾರುಣೀ ಗಿರಿಜೆ । ಸರಿ ಮತ್ತೆಯಿಂದ್ರಕಾಮಾ ।ಮಾರುತ ಅಹಂಕಾರನೆ
ಸ್ಮರಸುತ ರತಿಮನು । ಗುರು ದಕ್ಷ ಶಚಿಮರುತ ಪ್ರವಾಹ ಮೂ । ವರು
ಸನಕಾದ್ಯರೂ ॥ ದುರಿತ ಶಾಸನ ಶಶಿ । ತರಣಿ ಶತ ರೂಪ । ವರುಣ
ನಾರದರೆ ॥ ೧ ॥ ಮುನಿಗಳ ಶ್ರೇಷ್ಠ ಭೃಗು ಅನಲ ಪ್ರಸೂತಿ ಗಾಧಿ ।
ತನುಜ ವಾರಿಜಾಜನ್ನ । ತನಯರು ವೈವಸ್ವತ । ಎಣಿಸಿ ಹತ್ತನೆ ಸೂ
ರ್ಯ । ಅನಿಮಿಷಗುರುಸ್ತ್ರೀ । ದನು ಪ್ರವಾಹವೆಂಬ । ಅನಿಲನ್ನ ತಳೋದ
ರಿ । ಅನಿಲ ದೇವಜ ಅಶ್ವಿನೀ ದೇವತೆಗಳು । ಅನಳಾಕ್ಷ ಸುತ ।
ಧನಪತಿ ಪ್ರಹ್ಲಾದ । ಗುಣಿಸುವೆ ವಸು ಏಳನು ದಶರುದ್ರರು ।
ಯಿನಿತರೊಳಗೆ ಒಬ್ಬನ ಬಿಟ್ಟು ಸುದಿನ ॥ ೨ ॥ ದಶ ವಿಶ್ವ ದೇವರು ।ಶ್ವಸನರೊ
ಳಗೀರ್ವರ । ಪೆಸರು ತೆಗೆದು ಮತ್ತೆ । ಣಿಸಿ ನಾಲವತ್ತೇಳರನ್ನ । ರಸದ್ಯು
ನವಕೋಟಿ ತ್ರಿ । ದಶರೂಪ ಪಿತೃರು । ಎಸೆವ ಸೋಮ ಪಾನರು ಪಸರಿಪ
ಶತಸ್ಥರು । ನಸುನಗೆ ಕರ್ಮಜ ಋಷಿ ಗಳೀರ್ವರು ಮನು । ಹಸನಾದತಿ
ಚತು । ರ್ದಶ ಯಿಂದ್ರರ ಮಧ್ಯ । ಕುಶಲ ಪಪ್ಪರಿಗೆ । ತುತಿಸಿ ಕಾಲ
ಕಾಲದಿ ॥ ೩ ॥ ಗಂಧರ್ವರೆಂಟೇಳು । ಮಂದಿ ಸಿತರುಗಳು । ಮಾಂಧಾತ

ಬಲಿ ಶಶಿ । ಬಿಂದು ಪ್ರಿಯುವ್ರತ । ರಿಂದಲಿ ಪರೀಕ್ಷಿತ । ನಂದ ಕಕು
ಸ್ಥಗಯಾ । ಕುಂದದೆ ಯದುಕುಲ । ದಿಂದ ಬಂದ ಹೈಹಯನು ।
ಚಂದ್ರನಮಡದಿ ಯೋ। ಳೊಂದಾನೆ ಸೂರ್ಯನು । ಪುಂದ ಹಾಸಾಂಬುಜ
ಬಾಂಧವನಪತಿ । ಮಂದಾಕಿನಿ ರವಿ । ನಂದನನರಾಣಿ ಕಂದರ್ಪನಾಸೋಸಿ।
ವೃಂದಾರಕರಿಗೆ ॥ ೪ ॥ ಸದಮಲ ಸ್ವಾಹಾ ದೇವಿ । ಬುಧ ಉಷಾ
ದೇವಿ ಶನಿ । ಮುದದಿಂದ ಪುಷ್ಕರ ಸು । ಹೃದಯ ತುಂಬರರಿಂದ ।
ಮೊದಲಾಗಿ ನೂರು ಮಂದಿ । ತ್ರಿದಶ ಗಂಧರ್ವರು । ಚಪುರೆ ಊ
ರ್ವಶಿ ರಂಭೆ । ಮದನನ್ನ ಸೋಲಿಪ ಬಿಂ । ಕದ ಅಪ್ಸರಸರು ।
ಅದಿತಿ ಕಶ್ಯಪದಿತಿ । ಹದಿನಾರು ಸಾವಿರ । ಬುಧ ಮಕ್ಕಳು ತಪೋನಿಧಿ
ಗಳು ಯೆಂಭತ್ತು । ತದುಪರಿ ಅಜಾನಜ । ತ್ರಿದಶರು ಓಜಸ್ಥ ।
ರೆದುರಾಗಿ ನಾನಿಂದು ॥ ೫ ॥ ಹರಿ ಭಕ್ತರಾದ ಅಪ್ಸರ ಸ್ತ್ರೀಯರು
ಕೆಲವು । ಮರಳೆ ಚಿರಾಖ್ಯ ನಾಮ । ದಿರುತಿಪ್ಪ ಪಿತೃಗಳು ।
ಪರಿಪರಿ ನೂರುಕೋಟಿ ಪರಮ ಋಷಿಗಳಿಗೆ । ಸುರ ಗಂಧರ್ವ ವಿ।
ಸ್ತರ ಮನುಜ ಗಂಧರ್ವ । ಧರಣಿಜಾ ಕವಿ ಮೇಲರಿದು ಜಯಿಂ
ತಗೆ । ಕರ ಮುಗಿವೆ ಕ್ಷಿತಿಪರನು ಕೊಂಡಾಡುತ । ಇರಳು ಹಗಲು
ಉತ್ತುಮರು ಮನುಜರ ಪಾಡಿ । ನಿರುತ ಜಂಗಮ ಸ್ಥಾ । ವರಗಳ
ನೋಡುತ ॥ ೬ ॥ ಭುಜಗಶಯನನಿಂದ ಸೃಜಿಸಿದ್ದ ಸರ್ವರಿಗೆ ।
ನಿಜವಾಗಿ ಶಿರಬಾಗಿ ಭಜಿಸುವೆ ಚನ್ನಾಗಿ । ತ್ರಿಜಗ ದೊಳಗೆ ಯೆನ್ನ ।
ರಜ ತಾಮಸ ಗುಣದ । ವೃಜವ ಪೋಡಿಸಿ ನಿತ್ಯ । ಸುಜನ ಮಾರ್ಗವ
ತೋರಿ । ರಜನೀಚರಾಂತಕ । ವಿಜಯ ವಿಠಲನ್ನ । ಭಜಿಪೆನದಕೆ
ಸಿಮ್ಮ । ನಿಜ ವ್ಯಾಪಾರದಿ । ಸೃಜಿಸಿ ಕೊಡುತ ಧರ್ಮ । ವೃಜಗ
ಳೊದಗಿಳುತ । ಕುಜನ ಮತದ ಮೇಲೆ ಧ್ವಜ ವೆತ್ತಿಸುವದು ॥ ೭ ॥

೪ ನೇ ಪದದ ಕಠಿಣ ಶಬ್ದಾರ್ಥ

ಕರಣ - ಇಂದ್ರಿಯ, ಪರಮೇಷ್ಠಿ - ಬ್ರಹ್ಮ, ಸೌಪರಣಿ – ಗರುಡನ
ಹೆಂಡತಿ, ವಾರುಣಿ – ಶೇಷನ ಹೆಂಡತಿ, ಗಾಧಿತನುಜ - ವಿಶ್ವಾಮಿತ್ರ,

ಅನಿಮಿಷಗುರುಸ್ತ್ರೀ - ಬೃಹಸ್ಪತಿಯ ಹೆಂಡತಿ ತಾರಾ, ದನು - ನಿರಋತಿ, ಹತ್ತನೇ ಸೂರ್ಯ - ಮಿತ್ರನಾಮಕ ಸೂರ್ಯ, ಅಸದ್ಯು - ಸೋಮ ಪಾನಾರ್ಹರಲ್ಲದ ದೇವತೆಗಳು; (ಅಸ ಅಂದರೆ, ಸೋಮರಸ; ದ್ಯು- ಆಕಾಶ ಅರ್ಥಾತ ಶೂನ್ಯ ) ಏಳೊಂದನೆ ಸೂರ್ಯ - ಪರ್ಜನ್ಯ ನಾಮಕ ಸೂರ್ಯ; ಅಂಬುಜಬಾಂಧವ - ವಿವಸ್ವನ್ನಾಮಕಸೂರ್ಯನ ಸತಿ - ಸಂಜ್ಞಾದೇವಿ, ಕಂದರ್ಪನ ಸೊಸಿ - ಕಾಮಪುತ್ರ ಅನಿರುದ್ಧನ ಹೆಂಡತಿ ಉಷಾದೇವಿ, ಮಂದಾಕಿನಿ - ಗಂಗಾ, ರವಿನಂದನನ ರಾಣಿ - ಸೂರ್ಯ ಪುತ್ರಯಮನ ರಾಣಿ - ಶಾಮಲಾದೇವಿ, ಉಷಾದೇವಿ - ಅಶ್ವಿನೀ ದೇವತೆ ಗಳ ಹೆಂಡತಿ; ಓಜಸ್ಥ - ತೇಜೋವಂತರು, ಧರಣಿಜಾ - ಮಂಗಳ; ಕವಿ -- ಶುಕ್ರ

## ೫ ಅನಾದಿನಿತ್ಯ ತಾರತಮ್ಯ ಸುಳಾದಿ

### ರಾಗ ಆನಂದ ಭೈರವಿ ತಾಳ ಧ್ರುವ

ಶ್ರೀಮನ್ನಾರಾಯಣ ದೇವ ನೀನು ಶ್ರೀಲ |
ಕೂಡಿಯೆ ಕೂಡ ಸುಖಿಸುತಿದ್ದು |
ಶ್ರೀಮನ್ನಾರಾಯಣದೇವ ಶ್ರೀ ವಾಸುದೇವಾ ಮಾಯಾದೇವಿ |
ಶ್ರೀ ಸಂಕರುಷಣ ದೇವಾ ಜಯಾ ದೇವಿ |
ಶ್ರೀಪ್ರದ್ಯುಮ್ನ ದೇವಾ ಕೃತಿದೇವಿ |
ಶ್ರೀ ಅನಿರುದ್ಧದೇವಾ ಶಾಂತಿದೇವಿ |
ಶ್ರೀಮನ್ನಾರಾಯಣದೇವಾ ಶ್ರೀವಾಸುದೇ |
ವಾಮಾಯಾ ದೇವಿಯಲ್ಲಿ ಆ |
ಬೊಮ್ಮಕುಮಾರನ ಪಡದೆಯಲ್ಲಾ |
ಶ್ರೀ ಸಂಕರುಷಣದೇವಾ ಜಯಾದೇವಿಯಲ್ಲಿ |
ವಾಯುಕುಮಾರನ ಪಡದೆ ಯಲ್ಲಾ |

ಶ್ರೀಪ್ರದ್ಯುಮ್ನ ದೇವಾ ಕೃತಿದೇವಿಯಲ್ಲಿ ।
ವಾಣಿ ಭಾರತಿ ಯರ ಪಡದೆಯೆಲ್ಲಾ ।
ಶ್ರೀ ಅನಿರುದ್ಧದೇವಾ ಶಾಂತಿ ದೇವಿಯಲ್ಲಿ ।
ಬೊಮ್ಮಾ ಸರಸ್ವತಿಯರ ಪಡದೆಯೆಲ್ಲಾ ।
ಆಕುವರಿರಗೆ ಈಕುವರಿಯರನೆ ಯಿತ್ತು ।
ಮಾನವಿಯಾ ಮಾಡಿದೆ ಪುರಂದರವಿಠ್ಠಲ ॥ ೧ ॥

॥ ಮಟ್ಟ ತಾಳ ॥

ವಾಸುದೇವ ನಿಮ್ಮೊಳು ನಿವೇ ನೀವೆ ।
ಕೊಡಲುಳ್ಳವರಾದಿರಿ ನಿಮ್ಮೊಳು ನೀವೆ ।
ಬೀಗರಾಧಿರಿ ನಿಮ್ಮೊಳು ನೀವೆ ಬಿಜ್ಜಣರಾಧಿರಿ ।
ನಿಮ್ಮೊಳು ನೀವೆ ಬಿಜ್ಜಣ ಗರಿಗಳು ।
ನಿಮ್ಮೊಳು ನೀವೇ ಪುರಂದರವಿಠ್ಠಲ ॥ ೨ ॥

ತ್ರಿವಿಡಿ ತಾಳ

ಬೊಮ್ಮ ಸರಸ್ವತೀ ಪಡೆದರಯ್ಯಾ ಶೇಷನು ।
ಪರ್ವಗಿರೀಶ ಮಹೇಂದ್ರರಾ ।
ವಾಯು ಭಾರತಿ ಪಡೆದರಯ್ಯಾ ಪುತ್ರ ಪೌತ್ರ ।
ಪರಂಪರೆ ಯಾಗಿಪ್ಪೆ ಪುರಂದರವಿಠ್ಠಲ ॥ ೩ ॥

ರೂಪಕ ತಾಳ

ಆದಿಸೃಷ್ಟಿಯಲಿ ಜಯ ವಿಜಯರುದಿಸಿದರು ।
ಅವರಗಿಂದ ಆಮೇರೆ ಅಧಿಕರಯ್ಯಾ ಆಯ್ಯಾ ।
ಅವರಂತರಂತರದಲ್ಲಿ, ಅವರುದಿಸಿದರು ।
ಅವರಂತರಂತರದಲ್ಲಿ ಅವರ ನೋಡಯ್ಯಾ ।
ತಾರತಮ್ಯ ಅನಾದಿ ಸಿದ್ಧವಯ್ಯಾ ।
ಪುರಂದರ ವಿಠ್ಠಲನ ಸಂತತಿಯ ನೋಡಯ್ಯಾ ॥ ೪ ॥

ಝಂಪಿ ತಾಳ

ಸಿರಿ ಚತುರ್ಮುಖ ಪಂಚ ಮುಖಾದಿ ।

ಸುರರು ಮಾನವ ಮುನಿ ಮನುಜೋತ್ತಮರು ।
ತಾರತಮ್ಯ ಯುಕ್ತರಾಗಿ ಪುರಂದರ ವಿಠ್ಠಲನ್ನ ।
ಚರಣ ಸೇವಕರು ಸಾದೇವರು ॥ ೫ ॥

## ಅಟ್ಟ ತಾಳ

ನಿತ್ಯ ಪತ್ನೀಭಾವ ಲಕುಮಿಗಯ್ಯಾ ।
ನಿತ್ಯ ಪುತ್ರಭಾವ ಬೊಮ್ಮ ಪ್ರಾಣರಿಗಯ್ಯಾ ।
ನಿತ್ಯ ಪೌತ್ರಭಾವ, ವೈನತೇಯ ಶೇಷಗಿರಿಶಗಯಾ ।
ನಿತ್ಯ ಜಾರಭಾವ ಅಪ್ಸರ ಸ್ತ್ರೀಯರಿಗೆ ।
ನಿತ್ಯ ಶ್ರೀಪುರಂದರ ವಿಠ್ಠಲರೇಯಾ ॥ ೬ ॥

## ಆದಿ ತಾಳ

ಸತ್ಯಸ್ವರೂಪನೆ ಸತ್ಯಸೇವನೆ ।
ಸತ್ಯಸಂಕಲ್ಪನೆ ಸತ್ಯಕಾಮನೆ ।
ಸತ್ಯಭಾಷಣನೆ ಸತ್ಯಭೂಷಣನೆ ।
ಸತ್ಯಸದ್ಗುಣಾಢ್ಯನೆ ಸತ್ಯಕರ್ಮನೆ ।
ಸತ್ಯ ಶ್ರೀಪುರಂದರ ವಿಠ್ಠಲ ॥ ೭ ॥

## ಜತೆ

ಮನವಚನಗಳಲ್ಲಿ ಕಾಯಾ ಕರ್ಮಗಳಲ್ಲಿ ।
ನೀನೆ ನೀನೇ ಶ್ರೀಪುರಂದರ ವಿಠ್ಠಲ ॥ ೮ ॥
॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಿತವು ॥

## ಕಠಿಣ ಶಬ್ದಾರ್ಥ

ಬೀಗರು – ಹೆಣ್ಣು ಕೊಟ್ಟವರು ಮತ್ತು ತೆಗೆದುಕೊಂಡವರು
ಬಿಜ್ಜಣಿಗರು– ಜಾತಿಬಾಂಧವರು, ಸಾದೇವರು = ಹಿಂದೆ ಹೇಳಿದ ಬ್ರಹ್ಮಾದಿದೇವತೆಗಳು,

## ೬ ಸೂಳಾದಿ

### ರಾಗ ಗೌಳ ಧ್ರುವತಾಳ

ವಿಷ್ಣು ಭಕ್ತಿಯೋಗ್ಯ ತಾರತಮ್ಯಂಗಳು ।
ಸ್ಥಾವರ ಜಂಗಮರ ಮೊದಲುಮಾಡಿ ।
ಅವರಿಂದ ಸರ್ವ ಗುಣಾಧಿಕರು ಅವರಿಂದ ।
ದೇವಗಂಧರ್ವರು ಶತಗುಣಾಧಿಕರು ।
ಅವರಿಂದ ನೂರೆಂಟುಮಂದಿ ಅಲ್ಲದೆ ।
ನೂರುಕೋಟಿ ಋಷಿಗಳು ನೂರುಗುಣಾಧಿಕರು ।
ಅವರಿಂದ ಚಿರಾಖ್ಯನಾಮ ಪಿತೃಗಳು, ಎರ ।
ಡೈವತ್ತುಗುಣದಿಂದ ಅಧಿಕರು ।
ಅವರಿಂದ ಕೃಷ್ಣಭಕ್ತರಾದ ಅಪ್ಸರಸ್ತ್ರೀಯರು ಎರಡು ಗುಣಾಧಿಕರು ।
ಅವರಿಂದ ಆಜಾನಜದೇವತೆಯರು, ಓಜಸರು ಎಂಭತ್ತು
ಋಷಿಗಳು ಮತ್ತು ಗಂಧರ್ವರು, ತುಂಬುರರು ಶತ ।
ಊರ್ವಶಿಮೊದಲಾದ ಶತಸ್ಥರು, ಅಜಾನರೆಂಬವರು ।
ಮತ್ತೆ ಅಗ್ನಿಪುತ್ರರಾದ ಕೃತ್ವಾದಿಗಳು ಆಜಾನಜದೇವಸಮರು ।
ಇವರು ಹದಿನಾರುಸಹಸ್ರನೂರುಮಂದಿ ಸ್ತ್ರೀಯರಸರಿ ।
ಗುರು ಪುರಂದರವಿಠ್ಠಲ ೧ ।

### ಮಟ್ಟ ತಾಳ

ಕಶ್ಯಪಕುಗಳು ಯಶೋದಾದೇವಿ ಧರಾದೇವಿ ।
ಆಜಾನಜ ದೇವತೆಯರಿಂದಧಿಕರು ।
ಅದಿತಿ ದೇವಿಗಿಂತ ಕಶ್ಯಪನುತ್ತಮನು ।
ಆಜಾನರಿಗಿಂದ ಪುಷ್ಕರ ಕರ್ಮಪಾಲಕ ಅಧಿಕನು ।
ಅವರಿಂದ ಶನೈಶ್ಚರನಧಿಕ ।
ಉಷಾದೇವಿ ದಶಗುಣಕಧಿಕಳು ಆಕೆಯಿಂಬುಧನಧಿಕನು ।
ಬುಧನಿಂದ ಸ್ವಾಹಾದೇವಿ ದಶಗುಣಾಧಿಕಳು ।

ಸ್ವಾಹಾದೇವಿಯಿಂದ ಕೆಲವು ದೇವತೆಗಳಧಿಕರು ।
ಅವರಿಂದ ಅನಿರುದ್ಧನ ಸ್ತ್ರೀ ಉಷಾಗಂಗಾ ।
ಶಾಮಲಾ ಸಂಜ್ಞಾದೇವಿ ರೋಹಿಣೀ ಪರ್ಜನ್ಯರು ದ್ವಿಗುಣಾಧಿಕರು ।
ಗುರು ಪುರಂದರ ವಿಠಲ ನೇಮಿಸಿದ । ೨ ।

ತಾಳ ಆದಿ

ಇವರಿಂದ ಕರ್ಮಜ ದೇವತೆಗಳಧಿಕರು ।
ಅವರಿಂದ ಕಾರ್ತವೀರ್ಯ ಶಶಿಬಿಂದು ಮಾಂಧಾತ
ಭರತ ಪ್ರಿಯವ್ರತ ಪರೀಕ್ಷಿತ ಮೊದಲಾದ ಶತ ಪುಣ್ಯ ಶ್ಲೋಕರು ।
ಬಲಿ ಚಕ್ರವರ್ತಿ ಮೊದಲಾದ ಸಪ್ತೇಂದ್ರರು ।
ಮುನಿಗಳು ಹನ್ನೊಂದು ಉಚಿಥ್ಯ ಚ್ಯವನ ।
ಋಷಿಯು ಗಂಧರ್ವರು ಎಂಟು ಪಿತೃಗಳು ಸಪ್ತ ಪ್ರಹ್ಲಾದ ಪಾವಕನು ।
ಇವರು ಕರ್ಮಜ ದೇವತೆ ಇವರು ಅಜಾನಜ ।
ದೇವತೆಯರಿಂದ ದಶಗುಣಾಧಿಕರ ಮಾಡಿದ –
ಗುರುಪುರಂದರ ವಿಠಲ ರೇಯಾ ।। ೩ ।।

ತಾಳ ರೂಪಕ

ರುದ್ರರೇಕಾದಶ ವಸುಗಳೆಂಟು ದ್ವಾದಶಾದಿತ್ಯ ।
ಮರುದ್ಗಣತ್ರಯ ವೊಂದು ಋಭು ।
ಋಬ್ಬ ವಿಶ್ವೇದೇವ ಅಶ್ವಿನೀದೇವರಿಬ್ಬರು ಪೃಥ್ವಿ ।
ಪಿತ್ರರು ಮೂವರು ಶತಸ್ಥರೊಳು ಇಂದ್ರ ವಿವಸ್ವಾನ ।
ಮಿತ್ರ ವರುಣ ರುದ್ರರೊಳು ಸದಾಶಿವನು ।
ವಸುಗಳೊಳು ಅಗ್ನಿಯೊಬ್ಬ ಮರುತ ಆಹಂ ।
ಶಾರೀರಪ್ರಾಣ ಪ್ರವಹ ಮೂವರು ನಾವದೇವ ।
ತೋತ್ರ ಮರು ನವಕೋಟಿ ದೇವತೆಗಳು ಮ ।
ರುತ್ತಗಳೊಳು ಪ್ರಾಣಾಪಾನವ್ಯಾನೋದಾನ ಸ –
ಮಾನ ವಾಯು ಸ್ವಲ್ಪಧಿಕ ।
ಗುರು ಪುರಂದರ ವಿಠಲನ ಪರಮ ಪ್ರಿಯರು ।। ೪ ।।

ಝುಂಪಿ ತಾಳ

ಇವರಿಂದ ವಿಷ್ವಕ್ಸೇನ ಧನಪ ಗಣೇಶಾಧಿಕರು |
ಅವರಿಂದ ತಾರಾದೇವಿ ಮಿತ್ರ ನಿರುಋತಿ ಪ್ರಾವಹಿ |
ಇವರು ಪರ್ಜನ್ಯಕಿಂತ ಎರಡು ಗುಣಾಧಿಕರು |
ಅವರಿಂದ ಮರೀಚಿ ಅತ್ರಿ ಅಂಗಿರಸ ಪುಲಸ್ತ್ಯ –
ಪುಲಹ ಕ್ರತು ವಶಿಷ್ಠ ವಿಶ್ವಾಮಿತ್ರ |
ವೈವಸ್ವತ ಒಂಭತ್ತು ಅಧಿಕರು |
ಇವರಿಂದ ಅಗ್ನಿ ಭೃಗು ಪ್ರಸೂತ್ಯುತ್ತಮ |
ಮಿತ್ರಾದಿಗಳ ನೋಡೆ ಎರಡು ಗುಣಾಧಿಕರು |
ಇವರಿಂದ ನಾರದ ವುತ್ತಮ ವರುಣೋತ್ತಮ |
ಅಗ್ನಿ ದೆಶೆಯಿಂದ ವರುಣನೋಪಾದಿ |
ಅಧಿಕರು ಗುರು ಪುರಂದರವಿಠಲನ ಭಕ್ತರು || ೫ ||

ತಾಳ ತ್ರಿಪುಟ

ಯಮ ಸೂರ್ಯ ಚಂದ್ರ ಶತರೂಪಾದೇವಿ |
ಕ್ರಮದಿಂದ ಅರ್ಧಾನ್ಯಾರ್ಧ ಗುಣಾಧಿಕರು |
ಅವರಿಂದ ಸನಕಾದಿಗಳು ಉತ್ತಮರು |
ಅವರಿಂದ ಪ್ರವಹ ಉತ್ತಮ ಚಂದ್ರನಿಂದ ದ್ವಿಗುಣಾಧಿಕನು |
ಪ್ರವಹನಿಂದ ಸ್ವಾಯಂಭುವ ದಕ್ಷ ಗುರು ಶಚಿ ರತಿ ಅನಿರುದ್ಧರು |
ಇವರು ಆರುಮಂದಿ ಪಂಚಗುಣಾಧಿಕರು |
ಅವರಿಂದ ಅಹಂಕಾರಿಕ ಪ್ರಾಣ ದಶ ಗುಣಾಧಿಕ |
ಪ್ರವರ ಕಾಮೇಂದ್ರರು ಹತ್ತು ಗುಣಾಧಿಕರು |
ಇವರಿಂದ ಸೌಪರ್ಣಿ ವಾರುಣಿ ಪಾರ್ವತಿಯರು ಶತಗುಣಾಧಿಕರು |
ಇವರಿಂದ ನೀಲಾ ಮಿತ್ರವಿಂದಾ ಕಾಳಿಂದಿ ಲಕ್ಷಣ ಜಾಂ |
ಬುವತಿ ದ್ವಿಗುಣಾಧಿಕರು ನೀಲಾದಿಗಳಿಂದ ಜಾಂ |
ಬುವತಿ ಅಧಿಕಳು ರಮಾದೇವಿ |
ಉಮೆಯಿಂದ ಗರುಡ ಶೇಷ ರುದ್ರರು ಹತ್ತು ಗುಣಾಧಿಕರು |

ಅವರಿಂದ ವಾಣಿ ಭಾರತಿ ಶತಗುಣಾಧಿಕರು ।
ಅವರಿಂದ ಬ್ರಹ್ಮ ಪ್ರಾಯು ಶತಗುಣಾಧಿಕರು ।
ಇವರ ನೋಡಲು ಸಿರಿ ಕೋಟಿ ಗುಣಾಧಿಕಳು ।
ಯುವತಿ ಸಿರಿಯಿಂದನಂತಾನಂತ ಗುಣಗಳಿಂದಾ ।
ಸ್ಥವಿರ ಗುರು ಪುರಂದರ ವಿಠಲನು ಉತ್ತಮೋತ್ತಮನು ॥ ೬ ॥

## ಅಟ್ಟ ತಾಳ

ತ್ರಿವಿಧಜೀವರಸ್ಥಿತಿಯು ಸಾತ್ವಿಕ ರಾಜಸ ತಾಮಸ ।
ಇವರಲ್ಲಿಯೊಂದೊಂದು ಮೂರು ವಿಧವಾ ।
ದವರು ತಾಮಸ ಸಾತ್ವಿಕರು ಮನುಷ್ಯಾಧಮರಿ ।
ಗವರ ತಾಮಸ ರಾಜಸರು ದೈತ್ಯ ಭೃತ್ಯರಿ ।
ಗವರರು ತಾಮಸದ ತಾಮಸರು ದೈತ್ಯರೊಳು ಶ್ರೇಷ್ಠರು ।
ತ್ರಿವಿಧ ರಾಜಸರು ರಾಜಸ ತಾಮಸ ಅಷ್ಟು ಜನರು ।
ಇವರಲ್ಲಿ ರಾಜಸ ರಾಜಸರು ಮೂರು ವಿಧರು ।
ಪ್ರವರ ರಾಜಸ ರಾಜಸ ಸಾತ್ವಿಕ ಮನುಷ್ಯರು ।
ಇವರೊಳು ರಾಜಸ ರಾಜಸರಲ್ಲಿ ಬ್ರಾಹ್ಮಣರಿ ।
ಗವರ ರಾಜಸ ರಾಜಸ ರಾಜ ಕ್ಷತ್ರಿಯ ।
ರಿವರಿಗಧಮರು ರಾಜಸ ರಾಜಸ ವೈಶ್ಯರಿ ।
ಗವರರು ರಾಜಸ ರಜತಾಮಸರು ಚತುರ್ಥರು ।
ತ್ರಿವಿಧವಾದ ರಾಜಸ ಸಾತ್ವಿಕಪರ ಸ್ವಲ್ಪ ಹಂಸರು ।
ಇವರೊಳು ಸಾತ್ವಿಕ ಭಾಗ ಯತ್ಕಿಂಚಿತಧಿಕ ರಾ ।
ದವರು ಹಂಸಾಧಿಕ ರಾಜಸ ಹಂಸರು ।
ಹವಣದಿ ರಜೋರಾಜಸ ಅಧಿಕ ಸಾತ್ವಿಕ ಭಾಗಾ ಯತ್ಕಿಂಚಿದಧಿಕ ।
ರವರೆ ರಜೋರಾಜಸ ಸಾತ್ವಿಕ ಪರಮ ಹಂಸರು ।
ಇವರಲ್ಲಿ ಸಾತ್ವಿಕ ಭಾಗ ಯತ್ಕಿಂಚಿದಧಿಕರಾ ।
ದವರು ಹಂಸರಧಿಕ ರಾಜಹಂಸರು ।
ತ್ರಿವಿಧರಾಜಸ ರಾಜಸ ರಾಜಸ ಅಧಿಕ ।

ರವರಲ್ಲಿ ಭಾಗಯುಕ್ಕಿಂಚಿತ್ತು ಅಧಿಕರು ಈ ।
ಹವಣದಿ ರಾಜಸಾಧಿಕರಲ್ಲಿ ರಾಜಸಾಧಿಕ ಯುಕ್ತರಾ ।
ದವರು ವಾನಪ್ರಸ್ಥರಿಗೆಲ್ಲ ।।
ಪ್ರವರರು ರಾಜಸಾಧಿಕರಾದ ಬ್ರಹ್ಮಚಾರಿಗಳು ।
ಇವರಿಂದ ರಾಜಸಗುಣಾಧಿಕ ಗೃಹಸ್ಥರು ।
ತ್ರಿವಿಧ ಸಾತ್ವಿಕ ಪ್ರಭೇದವಾದ ಸಾತ್ವಿಕ ತಾಮಸರಾ- ।
ದವರೆ ಪಿತೃ ಗಂಧರ್ವ ಚಕ್ರವರ್ತಿಗಳು ।
ಪವಿತರರ ಸಾತ್ವಿಕ ರಾಜಸರು ಅಧಿಕ ದೇವತೆಗಳಿಗೆ ।
ಪ್ರವರ ಸಾತ್ವಿಕ ಸಾತ್ವಿಕ ರಾಜಸ ಶಚಿರತಿ ಇಂದ್ರ ಕಾಮರು ।
ಕವಳವಿಲ್ಲದ ಸಾತ್ವಿಕ ಸಾತ್ವಿಕ ಸಾತ್ವಿಕ ವಾಯು ಬ್ರಹ್ಮ ।
ರವರಿಂದ ವಂದ್ಯನಾದ ಪುರಂದರ ವಿಠಲ ।। ೭ ।।

ಏಕತಾಳ

ಜಯ ವಿಜಯ ಸೂರ್ಯ ಸಂಜ್ಞ ಪ್ರಾಣಜ್ಯೋತಿ ನಾಮ ।
ಭಾರತಿಯರಾಜ್ಞೆಯಿಂದ ಪೂರ್ವದ್ವಾರದಿ ।
ಮನುಷ್ಯೋತ್ತಮರು ಶಾಂತಿ ಅನಿರುದ್ಧನ ಸೇವಿಸರು ।
ನಂದಸುನಂದ ಶ್ರೋತ್ರಾಭಿಮಾನಿ ಚಂದ್ರ ರೋಹಿಣಿ ।
ಅಪಾನ ದ್ಯುನಾಮ ಭಾರತಿಯಾಜ್ಞೆಯಿಂದ ।
ದಕ್ಷಿಣ ದ್ವಾರದಿಂದಲಿ ಕರ್ಮಜದೇವತೆ ।।
ಪಿತೃಸರ್ವರು ಕೃತಿಪ್ರದ್ಯುಮ್ನನ ಪಾದ ಸೇವೆಯ ಮಾಡುವರು ।
ಕುಮುದ ಕುಮುದಾಕ್ಷರ ಅಗ್ನಿ ಸ್ವಹಾದೇವಿಯರ ।
ವ್ಯಾನವಾಯು ಪೃಥ್ವಿ ಶ್ರದ್ಧೆ ಭಾರತಿ ।
ದೇವಿಯರ ಆಜ್ಞಾ ಧಾರಕರಾಗಿ ಗಂಧರ್ವ ತುಂಬುರ ।
ಕಿನ್ನರ ಕಿಂಪುರುಷರು ಪಶ್ಚಿಮ ದ್ವಾರದಿ ಬಂದು ।
ಜಯದೇವಿ ಸಂಕರುಷಣನ ಧ್ಯಾನಿಪರು ।
ಪ್ರಬಲಬಲ ಇಂದ್ರಶಚಿ ಸಮಾನ ವಿದ್ಯುನ್ನಾಮ ।
ಭಾರತಿ ಅನುಜ್ಞೆಯಿಂದ ಶತಕೋಟಿ ಋಷಿಗಳ್ ।

ಉತ್ತರ ಬಾಗಿಲಲ್ಲಿ ಬಂದು ಮಾಯಾ ವಾಸುದೇವನರ್ಚಿಸುವರು ।
ಗಂಗಾಸಹ ವರುಣ ಉದಾನ ಆಕಾಶ ನಾಮ ಭಾರತಿ ।
ಆಪ್ಪಣೆಯಿಂ ಊರ್ಧ್ವ ದ್ವಾರದಿ ಬಂದು ಸರ್ವ ದೇವತೆಗಳು ।
ಲಕ್ಷ್ಮೀನಾರಾಯಣ ಗುರು ಪುರಂದರ ವಿಠಲನ ।
ಉಪಾಸ್ತಿಯನು ಮಾಡುವರು ॥

॥ ಜತೆ ॥

ಮುಕ್ತಾ ಮುಕ್ತರಿಂದ ಸೇವಿತ ಚರಣ ।
ತ್ರಿಧಾಮದಲಿ ವಾಸವಾದ ಗುರು ಪುರಂದರ ವಿಠಲ ॥ ೯ ॥

## ೬ ನೇ ಸೂಳಾದಿಯ ಕಠಿಣ ಶಬ್ದಾರ್ಥ

ಕೃತ್ವಾದಿಗಳು - ಅಗ್ನಿ ಪುತ್ರ ಪಾವಕಾದಿ ಯಜ್ಞಾಭಿಮಾನಿಗಳು, ಸ್ಥವಿರ - ಪುರಾಣ ಪುರಾತನ, ತ್ರಿಧಾಮ - ಶ್ವೇತದ್ವೀಪ, ಅನಂತಾಸನ, ವೈಕುಂಠ,

# ವಿಜಯ ವಿಠ್ಠಲ

## ೭ ಆರೋಹಣ ಗುಣ ತಾರತಮ್ಯ ಸುಳಾದಿ

ರಾಗ ಭೈರವಿ ತಾಳ ಧ್ರುವ

ತಾರತಮ್ಯವೆ ಕೇಳಿ ನೀಚಕ್ರಮಾನುಸಾರ ।
ಮೂರಾಳು ಭಕುತಿ ಭೇದ ಜ್ಞಾನದಿಂದ ।
ಮೂರು ವಿಧರೋಳು ನಿತ್ಯ ಸಂ ।
ಸಾರಿಗಳುಂಟು, ಸ್ವರ್ಗ ನಿರಿಯ ಭೂ ನ್ಯಾಯಿಯರು ।
ಧಾರುಣಿಯೊಳಗಿನಾಗಭಿಧಾನ ವಿಲ್ಲಾವಿ. ।
ಸ್ವಾತ್ರರಂಜಸವರ ಪ್ರತಿಜ್ಞಾ ।

ಘೋರ ತಾಮಸಿಗಳಿಗೆ ತಾರತಮ್ಯವೆ ವುಂಟು ।
ಬೇರವೆ ಮತ್ತೊಂದು ಬರಹದಲ್ಲಿ ।
ಸಾರುವೆ ತಿಳಿ ಸರ್ವ ಜೀವಿಗಳೊಳು ಅ- ।
ಪಾರನೀಚನು ನೀಚತಮ ಕಲಿಯು ।
ಸಾರವೆ ಯಿಲ್ಲಿಂದಿತ್ತ ಮುಕ್ತಿಯೋಗ್ಯ ಜನರನ್ನು ।
ಹಾರೈಸಿ ಮನೋವಾಚಾಕಾಯದಲ್ಲಿ ।
ಬಾರಿಬಾರಿಗೆ ಯಿದನೆ ಪಠಿಸಿದವರಿಗೆ ವಿ- ।
ಕಾರವಿಲ್ಲಾ ಕಾಣೆ ಯಿದ್ದ ಜ್ಞಾನಾ ।
ವೈರಾಗ್ಯವುಟ್ಟುವದು ಅಶೇಷವಾಗಿ, ತತ್ತ ।
ದ್ವಾರದಿಂದಲಿ ಬಿಂಬಾ ಕಾಂಬುವರು ।
ಸಾರಿದ್ದೈ ಸಾರಿ ಕೆಲಸಾರದೆ ಹರಿ ಬಂದು ।
ಸಾರಿದಲ್ಲಿ ಪೊಳೆವ ಅಡಿಗಡಿಗೆ ।
ಆರಾದರೇನು ಮತ್ತಾವನಾದರೆ ಯೇನು ।
ತಾರತಮ್ಯವ ತಿಳಿಯದಲೆ ಮುಕ್ತಿ ಯಿಲ್ಲಾ ।
ವಾರಿಯು ನೆಲೆಗಂಡು, ತಿರುಗಾಡಿದಂತೆ; ವಿ
ಚಾರ ಲೇಶಾವಿಲ್ಲಾ ಚಿತ್ತಾದಲ್ಲಿ ।
ಮಾರುತ ಮೆಚ್ಚುವನು ಮುದದಿಂದ ಪಾಲಿಸುತ್ತ ।
ಸೇರಿಸುವನು ವೇಗ ಸುಜನರೊಡನೆ ।
ನಾರಾಯಣ ಸರ್ವಾಧಿಷ್ಠಾನದಲ್ಲಿ ಯೆನ್ನ ।
ಶಾರೀರದೊಳು ನಿಂದು ನುಡಿಸಿದ ಮಾತು ।
ಸ್ವಾರಸ್ಯವಾಗಲಿ ಆಗದೆ ಪೋಗಲಿ ಉ ।
ದ್ಧಾರಮಾಡುವದು ತಪ್ಪ ತಿದ್ದಿ ।
ಪೇರನು ಯಿದು ಮೂಲ ದುಷ್ಟ ಜನರ ಮನಕೆ ।
ಬಾರದು ಚನ್ನಾಗಿ ವೊಲಿಸಿ ಪೇಳೆ ಭಾವ ।
ಓರಂತೆ ಯೆಲ್ಲ ಕೇಳಿ ಮುಕ್ತರ ಸ್ವಭಾವ ।
ವಿಸ್ತಾರವಾನಂದದಿಂದ ಹಿಗ್ಗುತಿಹರು ।

## ತಾರ ತಮ್ಯ ಸಾರ

ಮೂರಾರುಲಕ್ಷ ಕೋಟಿ ಸಂಖ್ಯೆಯಿಲ್ಲದ ನಮ |
ಸ್ಕಾರ ಮಾಡುವೆನು, ತ್ರಿಕರಣದಿ |
ಮೂರು ಭುವನದೊಳ ಸತ್ಕೀರ್ತಿವಂತರಾದ |
ಧೀರ ಶ್ರೀಪಾದರಾಯ ವ್ಯಾಸರಾಯ |
ಚಾರು ವಿಜ್ಞಾನ ದೀಪ್ತಾ ಪುರಂದರ ರಾಯ ಯಿಾ |
ಮೂರು ಮಂದಿಯು ಪರಿಪೂರ್ಣವಾದ |
ಕಾರುಣ್ಯದಳತಿಗೆ ಅರ್ಹನಾಗಿ ಹರಿಯ |
ಚಾರಿತ್ರ ಪೇಳುವಂತೆ ಹರಿಕೆ ಯಿತ್ತು |
ವಾರವಾರಕ್ಕೆ ಗುಣವಂತನ್ನ ಮಾಡುವ |
ಭಾರ ನಿಮ್ಮದು ಯೆಂದೆಂದಿಗಾದರು |
ಆರುವರ್ಗದಿ ಗೆದ್ದು ಪೂರ್ವೋತ್ತರವ ತಿಳಿವ |
ದಾರಿಯು ತೋರುವದು ಬಡುವೆ ದೈನ್ಯ |
ವಾರಣದಿಂದಲಿ ತೃಣಲತೌಷಧ ಗುಲ್ಮ |
ಭೂರುಹ ಯಿವು ಸ್ಥಾವರ ವೆನಿಪಾವು |
ವಾರಿಸಂಚಾರ, ಕ್ರಿಮಿ ಪಕ್ಷಿ ಮೃಗಗಳೆಲ್ಲ |
ನೂರು ಗುಣಕಾಧಿಕ, ಸ್ಥಾವರ ನೋಡೆ |
ಬ್ಯಾರೆ ಬ್ಯಾರೆ ಯೆಣಿಸೆ ಪೊಂದರಿಂದಾರಂಭಿಸಿ |
ನೂರು ಪರಿಯಂತರ ಪಾಗುತಿವಕೋ |
ಈರೀತಿಯಲ್ಲಿ ಪುಂಟು ಯಿವು ಜಂಗಮಗಳೆನ್ನಿ |
ಪೂರುತಿಯಲ್ಲಿ ಯೆಲ್ಲಾ ಮುಂದೆಕೇಳ |
ಮೂರೊಂದು ಜಾತಿ ವರ್ಣ ಮನುಜೋತ್ತಮರೆ ಪುಂ
ಹಾರುವ ರಾಜನ್ಯ ವೈಶ್ಯ ಶೂದ್ರ |
ಆರೈದು ಕೇಳುವದು ಅನುಲೋಮ ಪ್ರತಿಲೋಮ |
ವಾರಿತ ಯೆಂಬೋದಕ್ಕು ಯಿವರಿವರೊಳಗೆ |
ತೂರಿಯಾಶ್ರಮ ವಾನಪ್ರಸ್ಥ ಗೃಹಸ್ಥ ಬ್ರಹ್ಮ |
ಚಾರಿ ಯೆಂಬೋದಿಪ್ಪದು ಪಂಸರಿ ವಿಧದಿ |

ವಾರಣಾದಿ ಜಂಗಮಂ ನೋಡೆ ಮನುಜೋತ್ತಮರು |
ನೂರು ಗುಣದಿಂದ ವೆಗ್ಗಳರು |
ಧಾರುಣಿ ಪತಿಗಳು ಯಿವರಗಿಂತಲಿ ನಿತ್ಯ |
ನೂರು ಗುಣದಿಂದ ಉತ್ತಮರು |
ನೀರಂಶ ವೃಕ್ಷ ಮನುಜ ಗಂಧರ್ವರೆನ್ನಿಸಿ ಪೊಂದು |
ನೂರು ಗುಣದಿಂದಧಿಕ ಕ್ಷಿತಿಪರ ನೋಡು |
ನಾರದಾಮುನಿ ವಂದ್ಯ ಪಿತಯು ವಿಠ್ಠಲರೇಯು |
ಆರಾಧಿಸಿ ಕೊಂಬನೀತು ಯಿವರಿಂದ

ಮುಕ್ತಿ ಕಾಳ

ಸುರ ಗಂಧರ್ವರೊಳು ಅಷ್ಟೋತ್ತರ ಜನರಾ |
ಪರಹಿತರನ ಮಾಡಿ ಪುಳದವರನೆ ನಸ್ತುಸಿ |
ನರ ಗಂಧರ್ವರು ನೋಡಿ ಕೊಳಲಾಗಿ |
ಎರಡೈವತ್ತು ಗುಣಕೆ ಉತ್ತಮರೆನ್ನಿ |
ಚಿರಪಿತೃಗಳು ಶತಗುಣದಿಂದಧಿಕರಯ್ಯ |
ಹರಿಯಂಗಸಂಗ ಗೋಪಿಕಾಜನ ವುತ್ತ |
ಮರು ಕಾಣೊ ನೂರು ಗುಣ ಇವರಿಗಿಂತ |
ತರುವಾಯ ಅಜಾನಜ ದೇವತೆಗಳು |
ಸುರ ಗಂಧರ್ವರೊಳು ಪೇಳಿದ ಶತ ಜನರು |
ಎರಡೈವತ್ತು ಕಡಿಮೆ ನೂರು ಕೋಟಿ |
ಪರಮ ಋಷಿಗಳು ಸರಿಯೆನ್ನಿ ಅಜಾನಜರಿಗೆ |
ಹಿರಿದಾಗಿ ತಿಳಿ ಗೋಪೀ ಜನರಗಿಂತ |
ಎರಡು ಗುಣದಿಂದ ಉತ್ತಮರು ಯಿವರು |
ಎರಡೆಂಟು ಸಾವಿರ ಮೇಲೆ ನೂರು ಮಂದಿ |
ಸುರವೊಗನ ಮಕ್ಕಳು ಕೃಷ್ಣನ ಸತಿಯರು |
ಅರಿವದು ಮೂವತ್ತು ಜನ ಚಾರಣರು, ದೈ |
ತ್ಯರು ಯಿಷ್ಟೇ ಮೊದಿ ಸಬುವ ಜಾತಿಗಳೊಳಗೆ |

ತಾರ ತಮ್ಯ ಸಾರ

ಏರುಗುತಿಪ್ಪರು, ಯೆಪ್ಪತ್ತು ಜನರುವೊಂದೆ |
ಶತಗುಣದವರಯ್ಯಾ ಅಜಾನರ ಸಮರು |
ಮರಿಯಾಧಿವತೊಳಗೆ ಸಿಪ್ಪರು ನೂರು ಜನ |
ರಾ ವತ್ಸಲ ನಮ್ಮ ವಿಜಯ ವಿಠ್ಠಲ ರೇಯ |
ಮುಂಚವೆ ಯಿನಿತು ಮಾಡಿ ಕೊಡುತಲಿಪ್ಪ |

ರೂಪಕ ತಾಳ

ಪುಷ್ಕರ ಪರ್ಜನ್ಯನ ಮಡದಿ ಕೆಲವು ಸುಮ |
ನಸರು ಉತ್ತಮರು ಅಜಾನಸುರರ ನೋಡೆ |
ಬಿಸಜ ಮಿತ್ರನ ಪುತ್ರ ಶನೈಶ್ಚರ ನೆಂಬವನು |
ದಶಗುಣನೆಗ್ಗಳನು ಯೆಂದೆಂದಿಗೆ |
ಉಷಾದೇವಿ ಉತ್ತಮ ಶನಿಕಿಂತ ಲಾಲಿಪುದು |
ಕ್ಷಿತಿತನುಜ ಬುಧನು ಯಿರುತಿಪ್ಪನು ಸ್ವಲ್ಪದಲಿ |
ವಸುಜೇಷ್ಠನ ನಾರಿ ಸ್ವಾಹಾದೇವಿ ಉಷಾಗಿಂತ |
ದಶಗುಣಕೆ ಉತ್ತಮಳು ಕೆಲವು ದೇವತಿಗಳು |
ಬೆಸಸುವೆ ಕಿಂಚಿತು ವೆಗ್ಗಳಿಕೆಯ ನೋಡೆ |
ಪೆಸರುಳ್ಳ ಜಯಂತ ಯಿವರಿಗೆ ಸಮ ಗುಣನು |
ಅಸಮ ಪರ್ಜನ್ಯ, ಸಂಜ್ಞಾ ಗಂಗಾ ರೋಹಿಣಿ ಮ |
ಹಿಷವಾಹನ ರಾಣಿ ಶಾಮಲಾ ಸಮರಿವರು |
ಕುಶಲ ದಿಂದಲಿ ಕೇಳಿ ಸ್ವಾಹಾ ದೇವಿಗಿಂತ ರಂ |
ಜಿಸುವರು ವೊಂದು ಗುಣ ದಿಂದಧಿಕರು |
ದಶತ್ರಿಗುಣ ಬಡಿಗ್ಯಾ ಯಿವರಿಗಿಂತ ಉತ್ತಮ |
ವಶವಾಗಿ ಸುಮನಸರ ಪ್ರೀತಿ ಬಡಿಸುತಿಪ್ಪ |
ಪಶುಪಾಲ ಗೋಪಾಲ ವಿಜಯ ವಿಠ್ಠಲ ರೇಯನ |
ಹಸನಾಗಿ ಯೆಣಿಸಿ ಪೂಜಿಸುವರು ಚಿತ್ತದಲ್ಲಿ

ಝಂಪೆ ತಾಳ

ಮತ್ತೆ ವೂರ್ವಸಿ ರಂಭೆ ಮೊದಲಾದವರು ತೊಂ |

ಭತ್ತೆರಡು ಜನರೆಂಟು ಮಂದಿ ಗಂಧರ್ವರು |
ಪಿತರುಗಳು ಯೇಳು ಜನ ಬಲ್ಯಾಧಿಗಳು ದೇ |
ವೋತ್ತಮರು ಯಿದರಷ್ಟೆ ಮನುಗಳು ಹನ್ನೊಂದು |
ಹತ್ತುನೂರು ಮಂದಿ ಅರಸುಗಳು ವೆಂಟು ಯಂ |
ಭತ್ತು ಋಷಿಗಳು ಯಿವರು ಸಮರು ಸತತಾ |
ತತ್ವಳಿಸುತಿಪ್ಪರು ಯಿಲ್ಲಿಲ್ಲಿ ಕರ್ಮಜ ದೆ |
ವತೆಗಳು ಸಮವೆನ್ನಿ ಯಿವರೊಳಗ್ನಿ |
ಪುತ್ರರು ಕಶ್ಯಪ ಋಷಿ; ಕರ್ದಮ ಪ್ರಜಾ |
ಪತಿ ಪ್ರಹ್ಲಾದ ಶೃತಿ ಪ್ರಸಿದ್ಧಿ ಮೊದಲಾದ |
ಸತ್ಯವಂತರು ಸಮಾ ಯಿನ್ನು ಕೆಲವರು ವುಂಟು |
ಉತ್ತಮೋತ್ತಮ ನಮ್ಮ ವಿಜಯ ವಿಠ್ಠಲ ರೇಯನ |
ನಿತ್ಯದಲಿ ಧ್ಯಾನ್ಯನಿಸರು ವುಪದಿಷ್ಟರಾಗಿ | ॥ ೪ ॥

ತ್ರಿವಿಡಿ ತಾಳ

ಒಂದು ಕಡಿಮೆ ಐವತ್ತು ಮರುತುಗಳು |
ಒಂದು ಹತ್ತು ಜನ ರುದ್ರರೆನ್ನಿ |
ಅಂದದಲ್ಲಿ ಯೆಂಟು ವಸು ದ್ವಾದಶಾದಿತ್ಯ |
ಮುಂದೆ ವಿಶ್ವ ದೇವತಿಗಳು ಹತ್ತು |
ವೃಂದಾರಕರ ವೈದ್ಯ ದ್ಯಾವಾ ಪೃಥಿವಿ ಗುರು |
ಒಂದೆರಡು ಪಿತೃಗಳು ಋಭುಪ್ರ ಧಾನ |
ಗಂಧ ವಾಹನನ ಕೂಡಿಸಿ ನೋಡಲು |
ಅಂದೆ ಯೆಂದೆಂದಿಗೆ ಶತಸ್ಥರು ಕಾಣಿರೊ |
ನಂದದಲಿ ಯಿಲ್ಲಿ ತಿಳಿವ ಪ್ರಮೇಯಗಳುಂಟು |
ಹಿಂದೆ ಪೇಳಿದ ವುಕ್ತರುಗಳ ಗುಣಿಸುವದು |
ಅಂದೆ ಗರಳ ಕುಡಿದ ವಾಯು ಅಹಂಕಾರಿಕ– |
ಕುಂದದೆ ಪ್ರವಹ್ಯ ಯಿವರು ಮೂರು ಮಂದಿ, ಪಿತೃ |
ವೃಂದಾರಕರ ಗುರು ಸಹಿತವಾಗಿ |

ಸಂದೇಹ ಬಿಡಿಯದೆ ಗುಣಿತ ಮಾಡುವದು; ಹ,|
ನ್ನೊಂದು ನಾಲ್ಕು ಜನರ ಬಿಟ್ಟು ಉಳಿದ |
ಸಂದೋಹಗಳ ನೋಡು ಛುಂಭತ್ತೈದು ಮಂದಿ |
ಒಂದೆಸವರು ಧನಪ ಗಣಪಾ ಮತ್ತೆ ವಾಯು |
ನಂದನಾ ವಿಷ್ವಕ್ಸೇನರು ಯಿವರೊಳು |
ಪೊಂದಿದವರೆನ್ನು ಯಿವರ ತರುವಾಯು |
ಸಂದಿಪ್ಪರು ನಿತ್ಯ ಪ್ರಾವಹಿನ್ನೈಋತ್ಯ |
ವಂದಿಸುವದು ತಾರಾ ಮಿತ್ರನೆಂಬುವನು ಗುಣ |
ದಿಂದ, ಸಮ ಕಾಣೊ ಕ್ಷಿತಿಯೊಳಗೆ |
ಶಿಂಧುಶಯನ ನಮ್ಮ ವಿಜಯ ವಿಠ್ಠಲ ರೇಯ |
ತಂದೆ ತಾಯಿಯಾಗಿ ಸರ್ವರನ ಸಲಹುವಾ | ‖ ೫ ‖

ಧ್ರುವ ತಾಳ

ಎರಡು ಗುಣಕಾಧಿಕ್ಯರು; ಕ್ರಮದಿಂದ ಯಿವರೆಲ್ಲಾ |
ಪರಜನ್ಯನ್ನ ನೋಡಿ ಕೊಳಲಾಗಿ ಯಿತ್ತಲು |
ಮರೀಚ್ಯಾದಿಗಳು ಸಪ್ತ ಕೌಸಿಕ ವೈವಸ್ವತ |
ಇರದೆ ಪೊಂಭತ್ತು ಮಂದಿ ಸಮ ಮಿತ್ರಗಿಂದುತ್ತಮರು |
ತರುವಾಯ ಪ್ರಸೂತಿ ಅಗ್ನಿ ಭೃಗುಋಷಿ ಮೂ |
ವರು ಸಮ ಮರೀಚ್ಯಾದಿಗಳಿಗೆ ದ್ವಿಗುಣ ದಿಂದಧಿಕರು |
ಸುರಮುನಿ; ನಾರದನು ಯಿವರಗಿಂತುತ್ತಮನು |
ವರುಣ ದೇವನು ನಾರದಗಿಂತ ಪಾದಾರ್ಧ |
ಹಿರಿದು ಕಾಣೊ ಗುಣದಿಂದಲಿ ಯೆಣಿಸೆ |
ತರಣಿಸೂನು ಧರ್ಮ ವಿವಸ್ವಾನ್ ಸೂರ್ಯಚಂದ್ರ |
ತರಣಿ ಮಾನವಿ ಯಿವರು ಜನ ನಾಲ್ಕುಸಮರಯ್ಯ |
ವರುಣಗಿಂದಲಿ ಪೊಂದರ್ಧ ಗುಣಾಧಿಕ್ಯರು |
ಪರಮ ಪುರುಷ ನಮ್ಮ ವಿಜಯ ವಿಠ್ಠಲರೇಯನ |
ಕರುಣದಿಂದಲಿ ಈಪರಿ ಸುಖಿಸುತಿಪ್ಪರು | ‖ ೬ ‖

## ರೂಪಕ ತಾಳ

ಮರೀಚಿ ನಾಮದಲಿಪ್ಪ ಪ್ರವಾಹ ವಾಯು ।
ತರಣಿಗಿಂದಲಿ ನೋಡಿ ಗುಣದಿಂದುತ್ತಮ ಕಾಣೊ ।
ಸುರ ನಾಯಕನ ರಾಣಿ ಶಚಿದೇವಿ ಅನಿರುದ್ಧ ।
ಗುರು ದಕ್ಷಪ್ರಜೇಶ್ವರ ಸ್ವಾಯಂಭುವಮನು ।
ಗುರು ಮೊದಲಾಗಿ ಯೆಣಿಸು ವೊಂದೇ ಸಮನೆಂದು ।
ಇರುತಿಪ್ಪರು ನಾಸಿಕ್ಯರಿಂದಧಿಕ ಗುಣದವರೆನ್ನಿ ಅಹಂ ।
ಕಾರಿಕಪ್ರಾಣ ಗುರುಗಳಿಗಿಂತ ಹತ್ತುಗುಣಕೆ ।
ಹಿರಿಯ ನರಪ್ರಾಣ ವಿಜಯ ವಿಠಲರೇಯನ ಲೀಲೆಗೆ ।
ಶರಣೆಂದು ಕೊಂಡಾಡಿ ಮನಮುಟ್ಟಿ ನಲಿದಾಡೆ । ॥ ೭ ॥

## ಅಟ್ಟ ತಾಳ

ವೃತ್ರಾರಿ ಮನುಮಥ ವೊಂದೆ ಸಮರು ಮ ।
ರುತ್ತಾ ಹಂಕಾರಿಕನಿಂದಲಿ ನೋಡಲು ।
ಹತ್ತುಗುಣಾಧಿಕರೆದೆಂನಿಸುವರು ಪಾ ।
ರ್ವತ್ತಿ ಸೌಪರಣೀ ವಾರುಣೀ ವೊಂದೆಸಮ ।
ಚಿತ್ರಜ ಸುರಪತಿಗಿಂತ ನೂರು ಗುಣ ।
ಉತ್ತಮರಾಗಿ ವೊಪ್ಪುತಿಹರು ಕೇಳಿ ।
ಮಿತ್ರವಿಂದಾ, ಜಾಂಬುವತಿ, ನೀಲಾ ಭದ್ರ ।
ಮಿತ್ರನಂದನೆ ಲಕ್ಷಣೆ ಯಿವರಾರುಜನ ।
ರುತ್ತಮರೆನ್ನಿ ಸೌಪರಣಿಗಳಿಗೆ ಗುಣ ।
ಹತ್ತರ್ಧಮೇಲೆ ಶ್ರೀಲಕುಮಿಯಾವೇಶವು ।
ವ್ಯಕ್ತಿಯಾದಾಗಲು ಶೇಷದೇವರಿಗೆ ಕಿಂ ।
ಚಿತ್ತ ನೀಚರು ಕಾಣೊ ಜಾಂಬವತಿ ಅಧಿಕಳು ।
ಇತ್ತ ಲಾಲಿಪುದು ಗರುಡ ಶೇಷ ರುದ್ರ ।
ರುತ್ತಮರು ಕಾಣೊ ನೂರು ಗುಣ ತಮ್ಮ ।
ಪತ್ನಿಯರ ನೋಡೆ ಸರ್ವದಾ ಯಿದೆ, ಸರ ।
ಸ್ವತ್ತಿ ಭಾರತಿ ಯಿವರು ವೊಂದೆ ಸಮ ಐ ।

ಪತ್ತು ಯಿದರಷ್ಟು ಗುಣದಿಂದಧಿಕರು, ಪಾ |
ರ್ವತಿ ಪತಿ ಶೇಷ ಗರುಡ ದೇವರ ನೋಡೆ |
ಉತ್ತಮೋತ್ತಮ ನಮ್ಮ ವಿಜಯ ವಿಠಲರೇಯ |
ನಿತ್ಯಯೀಪರಿಯಿಂದ ನಡಿಸಿಕೊಂಬುವ ವೋಕಿಮ | ॥ ೮ ॥

ಆದಿ ತಾಳ

ಭಾರತಿ ವಾಣಿ ನೋಡೆ ವಾಯು ಬ್ರಹ್ಮರೀರ್ವರು |
ನೂರು ಗುಣದಿಂದ ವುತ್ತಮರೆನಿಸುವರು |
ಕ್ಷೀರವಾರಿಧಿ ಸುತೆ ಯಿವರನ್ನ ನೋಡಲು |
ವಿಾರಿ ಯಿಪ್ಪಳು ಕೋಟಿ ಗುಣದಿಂದ ಮಿಗಿಲೆನಿಸಿ ॥
ಸಾರುವೆ ಮುಂದೆ ಕೇಳಿ ಸಿರಿ ದೇವಿಗಿಂತ |
ಪಾವಾದನಂತ ಗುಣದಿಂದಧಿಕನಾಗಿ |
ನಾರಾಯಣ ನಿತ್ಯ ಕಲ್ಯಾಣ ಮೂರುತಿ |
ಪಾರತಂತ್ರ ದೋಷ ವಿದೂರ ವಿಶ್ವಮಯ |
ವೇರೆ ಯಿಲ್ಲದೆ ಮೆರೆವ ಸರ್ವೋತ್ತಮನಾಗಿ |
ಆರಾಧಿಸಿದವರಿಗೆ ಅತಿದಯಾಪರನಯ್ಯ |
ತಾರತಮ್ಯವ ಕೊಟ್ಟು ಭವ ಮಹಾರ್ಣವದಿಂದ |
ತಾರ ಮಾಡುವನು ವಿಸ್ತಾರ ವ್ಯಾಪ್ತಿ ಗೋಪ್ತಾ |
ಧಾರುಣೀ ಯೊಳಗಿದನೆ ಧರಿಸಿ ಹೃದಯದಲ್ಲಿ |
ಸಾರಿ ಸಾರಿಗೆ ಸಾರಿ ಪೇಳಿದ ವಚನ ಜನ್ನ |
ಭಾರವಹಿಸಿ ಹರಿ ಪೊರೆವನು ಪ್ರೀತಿಯಿಂದ |
ಶಾರೀರದಲ್ಲಿ ಯಿಪ್ಪ ವಿಜಯ ವಿಠಲರೇಯ |
ಕಾರಣ ಕಾರ್ಯದಲ್ಲಿ ವೊಂದಾನಂತವಾಗಿಹಾ | ॥ ೯ ॥

ಜತೆ

ಈ ಪರಿ ತಾರತಮ್ಯವೆ ತಿಳಿದರೆ ಗತಿಗೆ |
ಸೋಪಾನ ಸಿದ್ಧ ವೋ ವಿಜಯ ವಿಠಲ ಪೊಳೆವಾ ॥ ೧೦ ॥

## ಕಠಿಣ ಶಬ್ದಾರ್ಥ

ಕೆಲಸಾರು - ಬದಿಗಾಗು, ದೊರು ಸರಿ, ಓರಂತೆ – ಚನ್ನಾಗಿ ರಾಜನ್ಯ – ಕ್ಷತ್ರಿಯ, ಅನುಲೋಮ – ಉತ್ತಮ ವರ್ಣದ ಪುರುಷನಿಂದ, ನೀಚ ವರ್ಣದ ಸ್ತ್ರೀಯಲ್ಲಿ ಜನಿಸಿದವನು, ಪ್ರತಿಲೋಮ – ನೀಚ ವರ್ಣದ ಪುರುಷನಿಂದ ಉತ್ತಮ ವರ್ಣದ ಸ್ತ್ರೀಯರಲ್ಲಿ ಜನಿಸಿದವನು, ತುರಿಯಾಶ್ರಮ – ಚತುರ್ಥಾಶ್ರಮ, ಸನ್ಯಾಸ, ಸುರವೊಗ - ಅಗ್ನಿ: ವಸುಜೇಷ್ಠನ ನಾರಿ – ವಸುಗಳಲ್ಲಿ ಹಿರಿಯ, ಅಗ್ನಿ ಹೆಂಡತಿ ಸ್ವಾಹಾದೇವಿ ಮಹಿಷ ವಾಹನ - ಯಮ ಸಂದೋಹ – ಸಮೂಹ ಮಹಾರ್ಣವ – ಸಮುದ್ರ ತಾರವಮಾಡುವ – ದಾಟಿಸುವ ಅಭಿಧಾನ – ಹೆಸರು

### ೮ ಅವರೋಹಣ ಗುಣ ತಾರತಮ್ಯ ಸೂಳಾದಿಗಳು

ರಾಗ ಕಲ್ಯಾಣಿ ತಾಳ ಧೃವ

ತ್ರಿಜಗ ವಂದಿತ ತ್ರಿಗುಣ ರಹಿತಾ ಲಕುಮಿನಾಥಾ ।
ಅಜವಾತ ತಾತಾ ಅಂಡಜ ರಾಜಾ ವರೂಥಾ ॥
ಭುಜಗ ತಲಪನೀತಾ, ಭುಜಗ ಭೂಷಿತ ದಾತಾ ।
ಭುಜಗೋತ್ತಮ ಖ್ಯಾತಾ ವಿಜಯ ವಿಠ್ಠಲ ಪ್ರೀತಾ ।
ಸುಜನರ ಮನೋರಥಾ ನಿಜ ದೈವ ತಜ್ಞ ॥ ೧ ॥

ಮಟ್ಟ ತಾಳ

ಅಶೇಷ ದೋಷ ದೂರ ಗುಣ ಪರಿಪೂರ್ಣ ।
ಅಶೇಷ ಅವತಾರ ಅಗಣಿತ ವರ್ಣ ।
ಅಶೇಷ ಮಾನಂದ ಅಮೃತ ಘನ ।
ಸುಷೇಣನಾಮಾ ವಿಜಯ ವಿಠಲನು ।
ಈಶ ಬೊಮ್ಮಾದ್ಯರಿಗೆ ವಿಶೇಷ ಮಹಿಮಾ ॥ ೨ ॥

ರೂಪಕ ತಾಳ

ಇಂದಿರೇ ತರುಣಾಯು ವಿಭುಮ ಮಾರುತರು ।

ವೊಂದು ಕೋಟಿ ಗುಣ ಧಿಂದ ಕಡಿಮೆ ಅವ ।
ರಿಂದ ಲವರ ಸ್ತ್ರೀಯರು ಒಂದು ನೂರು ಗುಣ ।
ದಿಂದಲಿ ಅಧಮರು ಯೆಂದು ತಿಳಿವದು ।
ಲ್ಲಿಂದ ಗರುಡ ಶೇಷ ಇಂದು ಧರಿವರು ಪೂರ್ವರು ।
ಒಂದು ಹತ್ತುಗುಣ ಯೆಂದು ಕಡಿಮೆ ಯೆಣಿಸು ।
ದ್ವಂದರೊಳಗೆ ಮಿತ್ರವಿಂದಾದಿಗಳೆಂಟು ।
ಇಂದಿರಾ ಪತಿ ವಿಷ್ಣು ವಿಜಯ ವಿಠಲನಾರು ।
ಮಂದಿ ಸ್ತ್ರೀಯರು ಯೆಂದು ವಂದಿಸುವರು ಬಿಡದೆ ॥ ೩ ॥

ಝಂಪಿ ತಾಳ

ಸುರಪ ಕಾಮರು ಸಮ ಸೌಪರ್ಣ್ಯಾದಿಯು ನೋಡೆ ।
ಎರಡೈದು ಗುಣಕೆ ನ್ಯೂನನೆಂದು ತಿಳಿವದು ।
ತರುವಾಯ ಅಹಂಕಾರ ಪ್ರಾಣ ನೆಂಬುವನು ।
ತ್ವರಿತದಿ ಯಿೂರೈದು ಗುಣ ಕಡಿಮೆಯನ್ನ ।
ಸ್ಥಿರ ವಹುದು ಅನಿರುದ್ಧ ರತಿ ಸ್ವಾಯಂಭುವ ಮನು ।
ಗುರು ದಕ್ಷ ಶಚಿಗಳಿವರಾರು ಮಂದಿ ಸಮಾನ ।
ಮರುತ ಅಹಂಕಾರಿಗೆ ಹತ್ತು ಗುಣಕೆ ನೀಚಾ ।
ಅರಿವದು ಪ್ರವಾಹ ಮರುತ ನೆಂಬುವನು ।
ವರ ಅನಿರುದ್ಧಗಿಂತ ಐದು ಗುಣಕಧಮನೀ ।
ಸರಿಯಿದು ಯಮ ಮಾನವೀ ಚಂದ್ರ ಸೂರ್ಯರು ಸಮ ।
ಸರಿ ಪ್ರವಾಹನಿಗಿಂತ ಯೆರಡು ಗುಣಕೆ ನೀಚಾ ।
ವರುಣ ದೇವರು ಧರ್ಮಾದಿಗಳ ಪರಿಯಿಂದಲಿ ।
ಅರೆವೊಂದು ಗುಣ ಕಡಿಮೆ ಚನ್ನಾಗಿ ತಿಳಿವದು ।
ಸುರ ಮುನಿ ನಾರದನು ಅನಂತೆ ಯೆಣಿಸಲು ।
ತರುವಾಯ ಇದರಂತೆ ಯೆಣಿಸುವದು ಜ್ಞಾನಿಗಳು ।
ಉರರಾಧಿ ವಿಜಯ ವಿಠ್ಠಲನ್ನ ದಯದಿಂದ ವಿ ।
ಸ್ಮರಿಸುವೆನು ಕಾಮ ಇಂದ್ರಗೆ ಸ್ವಲ್ಪ ನೀಚಾ ॥ ೪ ॥

ತ್ರಿವಿಡಿ ತಾಳ

ಋಷಿಪುಂಗವ ಭೃಗು ಅನಲ ಕುಲೇಂದ್ರನು ।
ಪ್ರಸೂತೀ ಮೂವರು ವಿಷಮರಲ್ಲ ।
ರಘಾಧಿ ಪತಿಯ ನೋಡೆ ಪಾದ ಗುಣಕೆ ನ್ಯೂನರು ।
ಉಸುರುವೆ ಕೌಸಿಕಾ ವಿಧಿಯಸುತರಾ ।
ಪೆಸರಾದ ಮರೀಚಿ ಅತ್ರಿ ಮುನೀಶಾಂಗಿ ।
ರಸ ಪುಲಹ ಕ್ರತು ವಸಿಷ್ಠಾನು ರಂ ।
ಜನಿ ವೈವಸ್ವತ ಮನು ಯಿಂತೀಟೊಂದು ಜನಾ ।
ಈಸುಕದ ಸಮಾನರು ನಿಜ ಭೃಗ್ವಾದಿಗಳ ।
ದೆಸೆಯಿಂದ ಸ್ವಲ್ಪ ನೀಚರು ಗುಣದಲಿ ಮುಂದೆ ।
ಬಿಸಜ ಮಿತ್ರ ತಾರೆ ನಿರುತಿ ಪ್ರಾವಹಿ ।
ಶ್ವಸನನ ಮಡದಿ ಸ್ವಾಹಾ ನಾಲ್ವರು ಸಮಾನರು ।
ಋಷಿ ಮರೀಚ್ಯಾದ್ಯರಿಗೆ ದ್ವಿಗುಣಕಧಮರು ।
ಶಶಿರ ನಾಮಾ ಸಿರಿ ವಿಜಯ ವಿಠ್ಠಲನ್ನ ।
ಬಿಸಿಜ ಪಾದಕ್ಕೆ ನಮಿಸುವ ಕುಶಲರೆನ್ನ ॥ ೫ ॥

ಅಟ್ಟ ತಾಳ

ವಿಮಲ ವಿಷ್ವಕ್ಸೇನ ನಾಸತ್ಯ ಗಣಪತಿ ।
ಅಮಲ ಧನೇಶ್ವರ ಮರುತುಗಳು ಆ ।
ರ್ಯಮರು ರುದ್ರರು ವಸು ವಿಶ್ವೇದೇವತಿಗಳೂ ।
ಅಮಮ ಗಗನ ಧರೆ ಪಿತರಾದ್ಯರು ಸರಿ ।
ಸಮರೆಂದು ಗುಣಿಸದು ಇದರೊಳು ವುಕ್ತ ।
ಕ್ರಮ ತಾರತಮ್ಯವು ನಮಿಸುವೆ ಚವನಾದಿ ಋಷಿ ಪೃಥೂ ।
ತ್ತಮ ಕಾರ್ತವೀರ್ಯ ಶಶಿಬಿಂದ್ವಾದಿ ಸಾರ್ವ ।
ಭೌಮರು ಸಮಾನರು ಅಶ್ವಿನ್ಯಾದ್ಯರ ।
ಕ್ರಮದಲಿ ಇವರು ಕಿಂಚಿತು ಗುಣನ್ಯೂನರು ।
ಅಮರ ತಟನಿ ಪರ್ಜನ್ಯ ಸಂಜ್ಞರು ।

ಹಿಮಕರನಂಗನೆ ಶ್ಯಾಮಲೆ ವಿರಾಟ ।
ಸಮರು ಗಣಪತಿಗಿಂತ ದ್ವಿಗುಣ ಹೀನ ।
ಸಮಸರ ಮುಖನಂಗನೆ ಸ್ವಾಹಾದೇವಿ ।
ಶ್ಯಾಮಲಾದ್ಯರ ನೋಡೆ ಕಿಂಚಿತು ಗುಣ ಹೀನ ।
ಹಿಮಕರ ನಂದನ ಅಗ್ನಿ ರಾಣಿಗೆ ಹೀನ ।
ಸಮದಮೆ ಉಷಾದೇವಿ ಬುಧಗಿಂತಲಿ ಕ ।
ಡಿಮೆ ಯೋಡು ಗುಣಾ ಶನಿ ಪುಷ್ಕರನೆಂಬೊ ಕ ।
ರ್ಮಪ ದೇವತೆ ಗಳಿಗಿಂತ ಆಜಾನಜರು ।
ಪ್ರಮೆಯದಿ ತಿಳಿಸದು ಶತ ಗುಣ ಕಧಮರು ।
ಪ್ರಮೋದನಾಗು ಶ್ರೀ ವಿಜಯ ವಿಠ್ಠಲನ್ನ ।
ನಮಿಸಿ ಇವರ ಅನುಕ್ರಮ ಗುಣ ಅರಿವದು । ॥ ೬ ॥

### ಆದಿ ತಾಳ

ದೇವ ಗಂಧರ್ವರು ಕೆಲರು ಅಪ್ರತಿ ಋಷಿ ನೂರು ।
ಆ ಪೂರ್ವಚಿತ್ಯಾದ್ಯಪ್ಸರ ಸ್ತ್ರೀಯರೆಣಿಸು ಕರ್ಮ ।
ದೇವತೆ ಗಳಿಗೆ ಸಮಾನರೆಂದು ಇತ್ತ ಗಂ ।
ಧರ್ವ ಮಿಕ್ಕ ಮುನಿಗಳು ಆಜಾನಜರಿಗೆ ಸ ।
ಮ ವೆಂದು ತಿಳಿದೀಗ ಚಿರ ಪಿತೃಗಳ ಗು ।
ಣಾವಳಿ ಆಜಾನಜರಿಗೆ ನೂರು ಮಡಿ ಕಡಿಮೆಂದು ।
ಭಾವಿಸೋದು ಪಿತೃರ ನೋಡೆ ವ್ರಳದ ದೇವತೆಗಳು ।
ಯಾವತ್ತು ನೂರು ಮಡಿ ಹೀನರೆನ್ನಿ ಮನುಷ್ಯ ಗಂ ।
ಧರ್ವರು ಅವರು ನೋಡಾ ನೀಚರು ನೂರು ಗುಣಕೆ ।
ಇವರ ನೋಡೆ ಕ್ಷಿತಿಪರು ಅವರಂತೆ ತಿಳಿವದು ।
ಭೂವಲ್ಲಭರ ನೋಡಾ ಮನುಷ್ಯೋತ್ತಮರಿದೆ ಸಂಖ್ಯೆ ।
ಇವರಿಂದ ತಾರತಮ್ಯ ಪುಂಟು ಪಶ್ವಾದಿಯ ।
ಜೀವರವರವರೊಳಗವಾಂತರ ತಾರ ತಮ್ಯ ।
ಕೋವಿದರು ನೋಡಿ ಪಶ್ವಾದಿ ಜೀವಿಗಳ ನೋಡೆ ವೃಕ್ಷ ।

ಸ್ಥಾವರ ಜಂಗಮ ನ್ಯೂನರು ಯೆಂದು ತಿಳಿದು ತೃಣ ।
ಜೀವರು ಕಡಿಮೆ ಇವರು ಸತ್ಯಾಸತ್ಯ ವೆಂದು ಅರಿದು ।
ಈ ವಿಚಾರದಲಿ ನಡೆದು ಮುಕ್ತಿ ತರತಮ್ಯ ವೆಂದು ।
ಪಾವಮಾನೀ ಮತದಲಿ ಪರಿಪೂರ್ಣ ಚಿತ್ತ ವಿಟ್ಟು ।
ಭಾವನಾಮ ವಿಜಯ ವಿಠ್ಠಲ್ಲ ಜೀವಾಖಿಲ ಭಿನ್ನನೆಂದು
ಆವಾವ ವಾಕ್ಯದಲಿ ಸಿದ್ಧವೆಂದು ಭಜಿಸು । ॥ ೭ ॥

ಜತ್ತಿ

ತಾರ ತಮ್ಯವೆ ತಿಳಿದು ನಡೆದಾ ವಿರಿಷ್ಠರಿಗೆ ।
ಪಾರು ಮಾಡುವ ವತ್ಸಾ ವಿಜಯ ವಿಠಲ ರೇಯಾ ॥ ೮ ॥

## ಕಠಿಣ ಶಬ್ದಾರ್ಥ

ಅಂಡಜ ವರೂಥ – ಗರುಡ ವಾಹನ, ಭುಜಗ ತಲ್ಪ – ಹಾವಿನ ಹಾಸಿಕೆ ಯುಳ್ಳವ ಶೇಷ ಶಾಯಿ, ಭುಜಗ ಭೂಷಿತ ದಾತ — ಹಾವಿನ ಅಲಂಕಾರ ಉಳ್ಳ ಮಹ ರುದ್ರ ದೇವರಿಗೆ ಶೇಷ ಪದವಿಯನ್ನು ಕೊಟ್ಟಾತ ಸುಷೇಣ ನಾಮ – ಸು ಶೋಭನವಾದ ಸೇನ ಮಹದಾದಿ ರೂಪ ಪ್ರಕೃತಿಯು ಯಾವಾತನಿಂದ ಕ್ಷೋಭಿಸ.ವದೊ ಆಪರಮಾತ್ಮ; ದ್ವಂದ್ವರೊಳಗೆ– ದಂಪತಿಗಳ ಮಧ್ಯದಲ್ಲಿ, ಅಪಂಗೆ - ವರುಣನಿಗೆ ಖರರಾಥೀ – ಪೂರ್ಣ ಜ್ಞಾನಿ, ರಸಾಧಿಪತಿ – ವರುಣ ಶ್ವಸನನ ಮಡದಿ ಪ್ರಾವಹಿ, ಪ್ರವಾಹ ವಾಯು ದೇವರ ಹೆಂಡತಿ, ಶಶಿರ – ಸಜ್ಜನರ ತಾಪತ್ರಯಗಳಿಗೆ ಶಾಂತಿ ಕೊಡವವನೆ ೨ ಅತಿಶಯ ಶುಚಿ ೩ ಕ್ರೀಡಾರತ ದೇವರ ನಾಮ, ಅಮರ ತಟಿನಿ, – ಸುರ ನದಿ ಗಂಗಾ, ಪ್ರಮೋದ ನಾಮ - ಪ್ರಮೋದಯಂತ ಹೆಸರುಳ್ಳ ದೇವರು; ಸ್ವಭಕ್ತಾನ್ ಮೋದಯತೀತಿ ಪ್ರಮೋದನ: – ಸ್ವಭಕ್ತರು ಗಳಿಗೆ ಹೆಚ್ಚಿನಾನಂದವನ್ನು ಕೊಡುವವನು, ಭಾವನಾಮ – ಮುಕ್ತಾನ್ ಅವತೀತಿ ಪಾ ಭಾವ:, ಮುಕ್ತ ರಕ್ಷಕ

## ೯ ಗುಣತಾರತಮ್ಯ ಸೂಳಾದಿ

### ಧ್ರುವ ತಾಳ

ಶ್ರೀ ವನಿತೆಯುರಸಾ ಶೃಂಗಾರ ಗುಣನಿಧಿ |
ಪಾವನ್ನ ಮೂರುತಿ ಪರಮ ಪುರುಷಾ |
ಭಾವುಕ ಚರಿತಾ ಭವ ಭಯ ವಿದೂರ |
ಕೋವಿದಾ ಜಗದಂತರ್ಯಾಮೀ ಸ್ವಾಮಿ |
ದೇವಾ ದೇವೇಶಾ ಆತುಮಾ ಅಂತರಾತುಮಾ |
ತ್ರಿವಿಧ ಜೀವಿಗಳ ನಿರ್ಮಾಣನೇ |
ಕೈವಲ್ಯನಾಥಾ ಅತ್ಯಣು ಮಹಾ ಮಹತ್ತು |
ತಾವಿನಲಿ ಪೂರ್ಣ ಗುಪ್ತ ವ್ಯಾಪ್ತಾ |
ಕಾವ ಮುಕ್ತಾ ಮುಕ್ತರ ಯಿಚ್ಛಾಮಾತುರ ದಿಂದ |
ಯಾವತ್ತು ಕಾರಣ ಆದಿ ಘೋರ ಬೊಮ್ಮ |
ಆವಾವ ಕಲ್ಪದಲ್ಲಿ ಶಶ್ವದೇಕ ಪ್ರಕಾರ ಸ್ವಾ |
ಭಾವಿತ ಪ್ರವರ್ತ ಲೀಲಾ ವಿನೋದ |
ಕಾವಳವಾದಾ ದುರ್ಘಟ ಭವಾಟವ್ಯಕೆ |
ಪಾವಕ ನೆನಿಸುವ ಪರದೇವತೆ |
ಸೇವಿಸುವ ಭಕ್ತರ ಕುಲ ಕೊಜ್ರ ಪಂಜರ |
ಜೀವಾದಿಗಳ ಭಿನ್ನ ಜನಾರ್ದನಾ |
ಸ್ಥಾವರ ಜಂಗಮ ಸಿರಿ ಪರಿಯಂತ ಗು |
ಣಾವಳಿ ಅಧಿಕರನ್ನೆ ಮಾಡಿ |
ಪೂವಿಲ್ಲ ನೈಯ್ಯ ವಿಜಯ ವಿಠ್ಠಲ ತಾರ ತಮ್ಯ |
ಭಾವದಲ್ಲಿ ನಿಜಪಾ ಭಾಸ್ಕರಾನಂತ ತೇಜಾ | ॥ ೧ ॥

### ಮಟ್ಟ

ಹಂಗೆ ಸಿರಿದೇವಿ ಅನಂತ ಗುಣಕೆ ನೀಚಳು |
ಸಿರಿಗೆ ಪರಮೇಷ್ಟಿ ಕೋಟಿ ಗುಣಕೆ ಆ |

ಪರ ಕಾಣೋ ವಾಯು ಸರಸಿಜ ಭವ ಸಮಾ ।
ಸರಸ್ವತೀ ಭಾರತೀ ತಮ್ಮ ತಮ್ಮ ಪತಿಗಳಿಂದ ।
ನಿರುತದಲಿ ತಾವು ನೂರು ಗುಣಾಧಮರು ।
ಗರುಡ ಶೇಷ ರುದ್ರ ಮೂವರೊಂದೆ ಸಮಾ ।
ಸರಸ್ವತಿ ಯರಿಗಿಂತ ಹತ್ತು ಹತ್ತು ಗುಣ ನೀಚಾ ।
ಗಿರಿಜ ವಾರುಣಿಯರು ತಮ್ಮ ಪತಿ ಗಳಿಂದ ।
ಎರಡೈವತ್ತು ಗುಣ ದಿಂದ ಧಮರು ।
ವರಜಾಂಬುವತಿ ನೀಲಾ ಕಾಳಿಂದಿ ಸು ।
ದರ ಮಿತ್ರವಿಂದಾ ಲಕ್ಷ್ಮಣ ಭದ್ರಾ ಯಿ ।
ವರು ಆರು ಜನರು ಹರಿಯ ರಾಣಿಯರು ।
ಗರುಡ ಶೇಷ ರುದ್ರ ಇವರಿವರ ಸತಿ ।
ಯರ ಮಧ್ಯದಲ್ಲಿ ಇರುತಿಪ್ಪರು ಇವರು ।
ಸಿರಿಯಾ ವೇಶವನು ಇಲ್ಲದ ಸಮಯದಲ್ಲೈ ।
ವರು ಪ್ರದ್ಯುಮ್ನಗೆ ವಿಂಶತಿ ಗುಣ ಅಧಿಕರು ಯೆನಿಸುವರು ।
ಗರುಡಾದ್ಯರ ನೋಡೆ ಪಂಚ ಗುಣಕೆ ಹೀನಾ ।
ಸಿರಿಯಾವೇಶವದು ಬಂದು ಪ್ರಾಪ್ತ ವಾಗೆ ।
ಸರಿ ಯೆಂದೆನಿಸುವರು ಬಲರಾಮನ ಗುಣಕೆ ।
ಕರಡಿ ಸುತೆಯಲ್ಲಿ ಸದಾ ಸಿರಿಯಾವೇಶಾ ।
ಇರಲಾಗಿ ಇವರಿಗೆ ಕಿಂಚಿತು ಅಧಿಕಳು ।
ಅರಿವದು ಈಪರಿ ವಿಜಯ ವಿಠ್ಠಲಗೆಲ್ಲ ।
ಪರಮ ಪ್ರಿಯರು ತಮ್ಮ ಯೋಗ್ಯತಾನುಸಾರ । ॥ ೨ ॥

ರೂಪಕ ತಾಳ

ಇಂದ್ರನ್ನ ನೋಡಲು ಕಾಮ ಕಿಂಚಿತು ನೀಚಾ ।
ಯಿಂದ್ರ ರಾಣಿಯರಿಗಿಂತ ಒಂಭತ್ತು ।
ಒಂದು ಗುಣಕೆ ನೀಚರಾಗಿ ಒಪ್ಪುತಲಿಪ್ಪರು ।
ಮುಂದೆ ಅಹಂಕಾರ ಪ್ರಾಣನು ಸುರ ಪತಿ ಕಾಮ ।

ರಿಂದ ಹತ್ತು ಗುಣ ಅಸಧಿಕನು ।
ಇಂದ್ರಾಣಿ ಅನಿರುದ್ಧ ಸ್ವಾಯಂಭುವ ಮನು ದಕ್ಷ ।
ವೃಂದಾರಕ ಗುರು ರತಿ ಯಿವರಾರು ಜನ ಸಮ ।
ರೆಂದು ತಿಳಿವದು ಅಹಂಕಾರ ಪ್ರಾಣನ ದೆಶೆ ।
ಯಿಂದ ಈರೈದು ಗುಣ ದಿಂದ ಕೂಸ್ಯ (ಊನ) ರು ಕಾಣೋ ।
ಥಂದದಿಂ ಪ್ರವಹ ವರುಣಾನಿರುದ್ಧಾದಿ ಗ ।
ಳಿಂದ ವಿಚಾರಿಸೆ ಐದು ಗುಣಾಧಮನು ।
ಸಂದೇಹ ವಿನ್ನಿಲ್ಲಾ ಸನಕಾದಿಗಳು ಅಜನ ।
ನಂದನೆಯರು ಚಂದ್ರಸೂರ್ಯರಿವರು ಕ್ರಮ ।
ದಿಂದ ಅಲ್ಪಾರ್ಧದ ಗುಣದಲಿ ನೀಚರು ।
ಹಿಂದೆ ಪೇಳಿದಾ ಮರುತ ಪ್ರವಹನಿಗಿಂತಲಿ ।
ನ್ನೊಂದೊಂದು ಗುಣಗಳಿಗೆ ಕಡಿಮೆ ಯಿವರು ಯೆನ್ನಿ ।
ಮಂದಾಕಿನೀ ರಮಣಾ ನ್ನೊಬ್ಬನೇ ಧರ್ಮದ್ಯಾ ।
ರಿಂದ ಪಾದ ಪಾದಾರ್ಧ ಗುಣಕೆ ನೀಚಾ ।
ಒಂದೇ ಪರದೈವ ವಿಜಯ ವಿಠ್ಠಲ ರೇಯಾ ।
ಪೊಂದಿಸಿ ದಂತೆ ಪ್ರವರ್ತಿಸುವರು ॥ ೩ ॥

ಝಂಪಿ ತಾಳ

ತ್ರಿದಶ ಮುನಿ ನಾರದನು ವರುಣ ದೇವರಕಿಂತ ।
ಪಾದಕೆ ಗುಣ ನೀಚನು ಕಲಹಪ್ರಿಯಾ ।
ತದನಂತರದಲ್ಲಿ ಭೃಗು ಅನಿಲ ಪ್ರಸೂತಿ ನಾ ।
ರದ ಕಿಂತ ನೀಚ ತನವೆಂಬೋರಯ್ಯಾ ।
ವಿಧಿಸುತರು ಯೇಳುಜನ ಕೌಸಿಕ ವೈವಸ್ವತಾ ॥
ಅಧಮರು ಯೆಳ್ಳನಿತು ಭೃಗ್ವಾದಿಗೆ ।
ಇದೆ ಸತ್ಯ ಮಿತ್ರ ತಾರಾ ಮನುಜ ಪಾಹನ ।
ಸುಪತಿ ಪ್ರಸೂತಿ ಪೊಂದೇ ಸಮರು ।
ವಿಧಿಜಾಪ್ಯರ ನೋಡೆ ಗುಣ ಯೆರಡಧಮರು ।

ಮುದದಿ ವಿಷ್ವಕ್ಸೇನ ಗಣಪತಿ ವಿತ್ತಪಾ ।
ತ್ರಿದಶ ವೈದ್ಯರು ಯಿಾರ್ವರತ್ರಿನಿಯಮರು ಸಹಾ ।
ಅಧಮತ್ರೈವರು ಕಾಣೊ ಮಿತ್ರಾದ್ಯರಿಗೆ ಸ್ವಲ್ಪ ।
ಇದೆ ತಾರ ತಮ್ಯ ವೆಂದರಿವುದೆಲ್ಲಾ ।
ಮದನನಪಿತ ಸಿರಿ ವಿಜಯ ವಿಠಲ ಹರಿಯ ।
ಪದಗಳನು ಧ್ಯಾನಿಸುವ ಪದುಮಲರಿವರು ನಿತ್ಯಾ ॥ ೪ ॥

ತ್ರಿವಿಡಿ ತಾಳ

ವಸುಗಳೇಳು ಮಂದಿ ದಶ ರುದ್ರರು ಮಾತ್ರೆ ।
ಬಿಸಿಲಾತ್ಯರಾರು ಜನ ದಶ ವಿಶ್ವದೇವರು ।
ಶ್ವಸನ ಗಣದಲಿ ಯೆಣಿಸು ನಾಲ್ವತ್ತೆರಡರನ್ನಾ ।
ಎಶವ ಋಭು ಗಣದೊಳಗೆ ಇಬ್ಬರು ದ್ಯಾವಾ ।
ರಸ ಪಿತೃಗಳು ಮೂರರು ಹಸನಾಗಿ ತಿಳಿವದು ।
ವಿಸಕಾಪೆಣಿಸುವದು ಯಿವರನೆಲ್ಲಾ ಕೂಡಿಸಿ ।
ಉಸರುವೆ ಯಿವರ ಕೂಟದ್ಧವರ ಕೆಲಬರನ್ನಾ ।
ಶ್ವಸನರೊಳೈವರು ...ರಿವರಧಿಕ ।
ಕುಶಲದಲೆಣಿಸಿ ...ಂಭತ್ತು ಆರು ಜನಾ ।
ವಸುಗಳಿಂದಿಳಿಗೆ ...ಂತ ತಿಳಿವದು ।
ಬೆಸಸುವೆ ಯಿಂ... ವಿವಸ್ವಾನ್ ... ವರುಣಾ ।
ವಸುಗಳೊಳು ಅಗ್ನಿ ರುದ್ರರೊಳು ಸದಾಶಿವಾ !
ಶ್ವಸನರೊಳಿವರು ಯಿಲ್ಲಿ ಲೆಖ್ಖ ಗ... ।
ಣಿಸು ತೊಂಭತ್ತು ನಾಲ್ಕು ಜನರ... ।
ಪುಸಿ ಯಲ್ಲ ನೆಂ... ಸೇರಿದವರನ್ನಾ ।
ವಿಸ್ತರಿಸುವೆ ಗಂಗಾದ್ಯರು ಐವರು ॥
ಬಿಸಿಜಭವನ ಕೂಟ ಪರ್ಜನ್ಯ ನೆಂಬ್ಬಾ ।
ಎಣಿಸಲಾಗಾ ಶತಸ್ಸ... ಯಿವ್ವ ।
ಹೆಸರಾದ ಯಿವರೊಳು ಪ್ರಾಣಾದಿ ಗಳಿಗೆ ತ್ರಿ ।

ಶತತ ಸಮಾನರು ಪಿತೃ ಗಿಂತ ದ್ವಿಗುಣ ನೀಚಾ ।
ಚತುರರು ತಿಳಿವದು ಯಿದರೊಳಗೆ ಕೆಲವು ।
ದೇವತಿಗಳು ಪರ್ಜನ್ಯಗಿಂತ ಸ್ವಲ್ಪಾಧಮರು ।
ಹುತಾಶನನ ಮಡದಿ ಸ್ವಹದೇವಿ ಯಿವರಿಂದ ।
ಅತಿಶಯದಿ ನೋಡಿದಕೆ ಸ್ವಲ್ಪ ನೀಚಳು ಕಾಣೊ ।
ಗತಿ ತಪ್ಪದಂತೆ ಬುಧನು ಸ್ವಹಾ ದೇವಿಗೆ ।
ಶತ ಗುಣದಲಿ ಕಡಿಮೆ ಯೆನಿಸಿ ಕೊಂಬನು ।
ರತಿ ಪತೀ ಪಿತ ನಮ್ಮ ವಿಜಯ ವಿಠ್ಠಲ ಹರಿಯಾ ।
ತುತಿಸಿ ಸರ್ವದಲ್ಲಿ ಅಮೃತವನ್ನೀ ಬಯಸೋರು । ॥ ೭ ॥

ರೂಪಕ ತಾಳ

ಸುರತ ವೈದ್ಯರ ಮಡದಿ ಮರಳೆ ಕಡಿಮೆ ಕ್ಷಣಾ ।
ಕರಜಗಿಂದಲಿ ಸ್ವಲ್ಪ ಮರಿಯಾದೆ ಯಿಪ್ಪದು ।
ಭರದಿಂದ ಯೆಣಿಸು ಪುಷ್ಕರ ಶನೈಶ್ಚರಗಳು ।
ವಪುಷಾ ದೇವಿಗೆ ಯೆರಡೈದು ಗುಣ ಕಡಿಮೆ ।
ವರ ಕಶ್ಯಪನ ಅದಿತಿಯರು ಧರ ಕಿರೋರರುಗಳು ।
ಇರುತಿಪ್ಪರು ಶನೈಶ್ಚರಗೆ ಕಡಿಮೆ ಯೆನಿಸಿ ।
ಎರಡೈವತ್ತು ಗಂಧರ್ವರು ಪೂರ್ವಚಿತಿ ಮೇನಕಿ ।
ಯರು ರಂಭೆ ಘೃತಾಚಿ ತ್ರಾರವಮಾಲೋಚನೆಯು ।
ಅಪ್ಸರ ಸ್ತ್ರೀಯರುಗಳು ವೈಶ್ವಾನರನ ಮಕ್ಕಳು ಸಾ ।
ಸಿರ ಷೋಡಶ ಮಂದಿ ತರುವಾಯ ಯೆಂಭತ್ತು ।
ಪರಮ ಋಷಿಗಳು ಸುರರ ಒಡಿಗ್ಯಾ ಭುಕಃ ।
ವರನು ಜಯಂತನು ಸರಿಯಾಗಿಪ್ಪರು ।
ಮರೀಚಿ ನಂದನಾನಧಿಕಾ ।
ಪರಮ ಪುರುಷರಂಗಾ ವಿಜಯ ವಿಠ್ಠಲನು ಯಿಾ ।
ಪರಿಯಿಂದ ನಡೆಸುವ ಅವರವರ ಅರಿತೂ ॥ ೮ ॥

ಮಟ್ಟ ತಾಳ

ಮುನಿ ಪತ್ನೇರು ತ್ರಿಜಟೆ ವನಿತೆ ಅಜಾನಜರ |
ಎಣಿಸಿ ವ್ರೋಜಸರು ಮಾತನುವಾಗಿ ತಿಳಿವದು |
ಗಣಿಸಿ ಯಿವರು ಕಿರ್ಶೋರನ ನೋಡಲಾಗಿ ವೊಂದು |
ಗುಣಕೆ ಕಡಿಮೆ ಕರ್ಮಜ ಅನಿಮಿಷರನ ನೋಡೆ |
ಗುಣ ನೂರು ಕಡಿಮೆ ಗಣನೆ ಮಾಡುವದು |
ಮಿನುಗು ಅಪ್ಸರ ಸ್ತ್ರೀಯರು ಅಜಾನಾದಿಗೆ ಸಮ
ವೆನಿಸಿ ಕೊಂಡು ಮೆರೆದು ಅನುಸಯದಿಂದಿಪ್ಪರು |
ವನಜ ನಾಭನೆ ಸಿರಿ ವಿಜಯ ವಿಠ್ಠಲ ತನ್ನ |
ವನದಿಜ್ಜೆ ಮಲಿ ಆಟವನು ಆಡುತಿಪ್ಪ || ೯ ||

ಅಟ್ಟ ತಾಳ

ಎಣಗಿ ಪೇಳುವೆನು ಚಿರಾಖ್ಯ ನಾಮ ಪಿ |
ತೃಗಳು ಅಪ್ಸರ ಸ್ತ್ರೀಯರಿಂದಲಿ ನೋಡೆ |
ಎರಡು ಗುಣಕೆ ನೀಚರು ಯೆನಿಸುವರು |
ಎರಡೈವತ್ತು ಕೋಟಿ ಋಷಿಗಳು ಪಿ |
ತರದೆಶೆಯಿಂದ ಶತ ಗುಣ ಶೂನ್ಯರು |
ಸುರ ಗಂಧರ್ವರೊಳು ನೂರೆಂಟು ಮಂದಿ ಯಾ |
ಅರಿದು ಮಿಕ್ಕವರನ್ನ ಋಷಿಗಳು ನೋಡಲಾಗಿ |
ಸ್ಥಿರವೆನ್ನಿ ನೂರು ಗುಣಕೆ ನೀಚರೆಂದು ಪೇಳಿ |
ಕರಿ ಭಯ ಹರ ನಮ್ಮ ವಿಜಯ ವಿಠಲ್ಲಾ ಯೆ |
ಲ್ಲರಿಗೆ ಧೊರೆಯಾಗಿ ಮೆರೆವುತಲಿಪ್ಪ || ೧೦ ||

ಆದಿ ತಾಳ

ಮನುಜ ಗಂಧರ್ವರು ಅವರಿಂದೆಣಿಸೆ ನೂರು |
ಗುಣಕೆ ಅಧಮರಾಗಿ ರಂಜಿಸುತಿಪ್ಪರು |
ಕನಲದೆ ರಾಯರ ಅವರಂತೆ ತಿಳಿದು ಮಾ |
ತನು ಪೇಳೆ ನೃಪರ ನೋಡೆ ಮನುಜೋತ್ತುಮರನ್ನ |

ಅನುಮಾನ ಮಾಡದೆ ನೃಪರ ದೆಶೆಯಿಂದ ।
ಗುಣ ನೂರು ಕಡಿಮೆ ಆ ತರುವಾಯದಲ್ಲಿ ವುಂಟು ।
ಘನ ಜಂಗಮ ಸ್ಥಾವರಗಣವೆ ಮೊದಲು ಮಾಡಿ ।
ಗಣಿತ ಮಾಡಲು ಮನುಜೋತ್ತಮರು ಸರ್ವಾಧಿಕರು ।
ಇನಿತು ತಾರತಮ್ಯ ತೃಣ ಜೀವ ಪರಿಯಂತ ।
ಮನದೊಳು ತಿಳಿ ಮುಕ್ತಿ ಯೋಗ್ಯರಾನಂದವ ।
ಮನೆಮನೆ ದೈವ ವಿಜಯ ವಿಠ್ಠಲ ತನ್ನಾ ।
ನೆನೆಪೆ ಪಾಲಿಸಿ ಹೃದ್ವನಜ ದೊಳಗೆ ಪೊಳೆವಾ ॥ ೧೧ ॥

ಜತ್ತೆ

ಗುಣ ತಾರತಮ್ಯವ ತಿಳಿವದು ಚನ್ನಾಗಿ ।
ಗುಣವಂತ ವಿಜಯ ವಿಠ್ಠಲ ವ್ಯಕ್ತನಾಗವಾ ॥ ೧೨ ॥

## ೯ ನೇ ಸೂಳಾದಿಯ ಕಠಿಣ ಶಬ್ದಾರ್ಥ

ಜೀವಿಗಳ ನಿವಾರ್ಣನೆ - ಜೀವಿಗಳಿಗೆ ದೇಹಾದಿಗಳನ್ನು ಕೊಡುವವನೆ, ಕಾವಳವಾದ - ಕತ್ತಲೆ ಮುಸುಕಿದ. ದುರ್ಘಟ - ಅಸಾಧ್ಯ ಭವಾಟವಿ - ಸಂಸಾರ ವೆಂಬ ಅರಣ್ಯ. ಪಾವಕ - ಅಗ್ನಿ.

ಪೂವಿಲ್ಲನೈಯ್ಯ - ಹೂಬಾಣ ವುಳ್ಳ ಮನ್ಮಥನ ತಂದೆ. ಕರಡಿಸುತೆ - ಜಾಂಬುವತಿ ವೀಂದ್ರ - ಗರುಡ ವಸುಜ ವಾಹನ. ನಿಕುಂತಿ ಬಿಸಿಜ ಸಖರ ಕೋಟಿ - ಕಮಲ ಮಿತ್ರರಾದ ಹನ್ನೆರಡು ಜನ ಸೂರ್ಯರ ಸಮೂಹ, ಸಿತನದಿ - ಗಂಗಾನದಿ ಅಮೃತ - ಮೋಕ್ಷ ಕ್ಷಪಾಕರಜಾ - ಚಂದ್ರನ ಮಗ ಬುಧ ಭುಕುವರ - ಅಗ್ನಿಪುತ್ರ ಪಾವಕ ಕನಲದೆ - ಕೋಪಿಸದೆ ಮನೋಚಾಂಚಲ್ಯ ಬಿಟ್ಟು. ಮನೆಮನೆದೈವ = ಪ್ರತಿ ಪ್ರತಿ ಜೀವಿಗಳ ಹೃದ್ಗುಹಾವಾಸಿ ಬಿಂಬನಾದ ಹರಿ.



## ೧೦ ತೃಣಾಂತ ವಿಡಿದು ಬ್ರಹ್ಮದೇವರ ಪರಿಯಂತ ಜೀವರುಗಳ ವಿಭಾಗ ಒಂದು ನೂರಾ ಮೂವತ್ತು ಮೂರು ಕೋಟಿ ದೇವತೆಗಳ ತಾರ ತಮ್ಯ ವಿವರ

— ಸೂಳಾದಿ —

ರಾಗ ಭೈರವಿ ಧ್ರುವ ತಾಳ

ತೃಣ ಗುಲ್ಮ ಲತೆ ತೃಣ ರಾಜ ವೃಕ್ಷಾದ ತರು |
ವನಚರ ಖಗ ಮೃಗ ನಾನಾ ಪರಿಯೂ |
ಮನುಜ ಕ್ಷಿತಿಪ ಮನುಜ ಗಂಧರ್ವ ಪರಿಯಂತ |
ಎಣಿಕೆ ಮಾಡಿದರಾಗೆ ಅವಿ ಭೋಕ್ತರು |
ಗುಣಿಸಿ ನೋಡಲು ಯಿದರ ಗಣಿತ ಅಪರಿಮಿತ |
ಕೊನೆ ತಿಳಿದವನಿಲ್ಲ ಯೆಂದೆಂದಿಗೆ |
ಇನಿತು ಚೇತನಗಳು ಲಕ್ಷ ಯೆಂಭತ್ತು ನಾಲ್ಕು |
ಜನನ ಪ್ರಭೇದದಿಂದ ಪ್ರಾಚುರ್ಯರು |
ಗುಣದಿಂದ ಪೋರ್ವರೋರ್ವರಧಿಕವಾಗಿಪ್ಪರು |
ಜನುಮ ಜನುಮದಲ್ಲಿ ವೃತ್ತಿ ಜ್ಞಾನಾ |
ತನು ಭಿನ್ನರಾಗಿ ಪುಟ್ಟುವರು ಧರಣಿ ಮೇಲೆ |
ದಿನಪ್ರತಿದಿನ ಕರ್ಮ ವಶದಿಂದಲಿ |
ತನು ಸಮೇತ ವಲ್ಲವೆ ಯೇಕಾಂತದಲ್ಲಿ ಸಲ್ಲಾ |
ಅನುಮಾನ ಯಿದಕಿಲ್ಲ ಯಿವರಿಗೆ ಪೆಸರು ಕಾಣೋ |
ಮನದೊಳು ತಿಳಿ ಯಿವರ ತರುವಾಯದಿ |
ಅನಿಮಿಷ ಗಂಧರ್ವ ಬೊಮ್ಮಾದಿ ಪಿಡಿದು ಯೋ |
ಚನೆ ಮಾಡು ಮೂವತ್ತು ಮೂರು ಕೋಟಿ |
ಮಿಗೆ ನಗುತಿಪ್ಪರು ಯೆಲ್ಲ ಸಾಂಶರು |
ನೆನವು ಧನ್ಯನಾಗೊ ನಾನಾ ಪರಿಯಿಂದ |

ಅನುಸಯದಲಿ ನಾಲ್ಕುಬಗೆಯಲಿಪ್ಪಾ ॥
ಜನರುಂಟು ಮುಖ್ಯಾಮುಖ್ಯ ತಾತ್ವಿಕ ಯೋ |
ಚನೆ ಮಾಡು ಆತಾತ್ವಿಕ ರಾಜಾನಜರ |
ಗಣಣೆ ಯಾದುದಕೆ ಪ್ರೊಕ್ಷಣಿಸು ವರ್ತಮಾನ |
ವಜಜ ಸಂಭವ ನಿಡಿದು ಋಭು ಗಣಾಂತ |
ತನವು ಧರಿಪ ಸಂಖ್ಯೆ ಮೂವತ್ತು ಮೂರು ನೂರು |
ಇನಿತರೊಳು ಯೆರಡು ವಿಧಪ್ರೊ ಪ್ರಾಮುಖ್ಯರು |
ಘನವಂತ ಜನ ವಿಂಶತಿ ಶತ ಪೃಥಗಾದವರು |
ಸನುಮತ ಋಭುಗಣ ತ್ರಿಸಹಸ್ರದ ಮೇಲೆ |
ಎಣಿಸು ನೂರೆಂಭತ್ತು ಜನರು ಪ್ರೊಂದೇ |
ವಿನಯದಿಂದಲಿ ಮುಂದೆ ಅಮುಖ್ಯ ತಾತ್ವಿಕ |
ಜನಕಿಂತ ವೆಗ್ಗಳರು ದೇವತ್ವ ಆದಿಯಲ್ಲಿ |
ಮುನಿ ಜನ ಮಿಕ್ಕಾದವರ ವಿಭಾಗ ಮಾಡಿ ತೆಗದು |
ಮಣಿದು ನಮೊ ಯೆನ್ನು ಶತಸ್ಥರ್ಗೆ |
ಕನಸೀಲಿ ಮನಸೀಲಿ ಯಿಲ್ಲಿತನಕ ಮುಂ |
ದಣ ವಿಚಾರವ ಕೇಳು ಕಾರ್ಮಿಕ ಲೋಕಾಗ್ನಿ |
ತನುಜ ಪಾವಕ ಸವಮಾನಿವಿಡಿದು |
ಶನಿ ಪರಿಯಂತ ಅಮುಖ್ಯ ತಾತ್ವಿಕ |
ಗಣ ವೆನ್ನಿ ಯಿವರು ಕರ್ಮಜ ಸುರರು |
ಎಣಿಕೆ ಮಾಡು ಯಿಂತು ಮುನ್ನೂರು ಕಡಿಮೆ ಯಾಗಿ |
ಗುಣ ಸಹಸ್ರರೆನ್ನು ಮಧ್ಯಮಾಧ |
ಗುಣ ಪೂರ್ಣ ವಿಜಯ ವಿಠಲ ರೇಯನ ಪಾದ |
ವನಜ ಧ್ಯಾನವ ಮಾಡು ಯಿವರ ಮಧ್ಯದಲಿ ॥ ೧ ॥

ಮಟ್ಟ ತಾಳ

ಮೊದಲಿಗೆ ಪೇಳಿದ ಶತಸ್ಥರೊಳಗಿದ್ದ |
ಪದುಮ ಬಾಂಧವನೊಬ್ಬ ಪರ್ಜನ್ಯ ನಾಮಕನು |

ಇದರೊಳಗೆ ಗಣನೆ ಸಿದ್ಧವಾಗಿದೆ ಸತ್ಯ ।
ಮುದದಿಂದಲಿ ತತ್ವಾಭಿಮಾನಿಗಳ ।
ಲ್ಲದ ದೇವತಿಗಳ ಪೆಸರು ಕೊಂಡಾಡುವದು ।
ಉದಕ ಪೂರಿತವಾದ ತೀರ್ಥಾಭಿಮಾನಿಗಳು ।
ಅದರ ತರುವಾಯು ಪುಷ್ಕರ ಕರ್ಮಾಭಿಮಾನಿಗಳು ।
ಒದಗಿ ಯೆಣಿಸಬೇಕು ನವ ಕೋಟಿಗೆ ತ್ರಿಶತಿ ।
ತ್ರಿದಶ ಸಾವಿರ ಕಡಿಮೆ ।
ಬುಧರು ಭಕುತಿಯಿಂದ ವಿವರಗಳಿಲ್ಲಿಗೆ ತ್ರಿ ।
ವಿಧ ವಾಯಿತು ಕೇಳಿ ನವ ಕೋಟಿ ಸಂಖ್ಯಾ ।
ಭವ ಸಾಗರ ಹಾರಿ ವಿಜಯ ವಿಠಲ ರೇಯ ।
ಶವಣೆ ಯಿಂದಲಿ ಯಿವರ ಯಿಾಪರಿ ನಿರ್ನೈಪ ॥ ೨ ॥

ತ್ರಿವಿಡಿ ತಾಳ

ಅಮರರ ಕುಲದಿಂದ ಪುಟ್ಟಿದನಾಖ್ಯರು ।
ಕ್ರಮದಿಂದ ತಿಳಿವದು ಚತುರ ವಿಂಶತಿ ಕೋಟಿ ।
ದ್ರುಮ ಲತೆ ಫಲ ಪುಷ್ಪ ವಿಕ್ಷ್ಮಾದವಕೇ ವು ।
ತ್ತಮರಾಗಿ ಯಿಪ್ಪರು ಅಂತದಿಂವ ।
ಅಮರ ಮೊಗ ಪುತ್ರರು ಹದಿನಾರು ಸಾವಿರ ।
ರಮಣೀಯರಾದ ಅಪ್ಸರ ಸ್ತ್ರೀಯುದು ನೂರು ।
ವಿಮಲ ತುಂಬುರಾದಿ ಶತ ಗಂಧರ್ವ ಸಹ ।
ಸಮವಾಗಿ ಯಿಪ್ಪರು ಯಿವರೆ ಅಜಾನಜರೈಯಾ್ಯ ।
ನಮಿಸಿ ಕೊಂಡಾಡುವದು ಶತ ಕವ್ಯ ಭೋಕ್ತರ ।
ಶಮ ದಮೆ ಗುಣ ವೃಷ್ಟ ಸಿದ್ಧ ಸಾಧ್ಯರು ಸರ್ವ ।
ಸಮುದಾಯ ಭೃತ್ಯಾದಿ ಕರ್ಮ ಕಾರರು ಮತ್ತೆ ।
ಅಮ್ನಿತ ಪಿತೃ ಗಂಧರ್ವ ಅಪ್ಸರ ಜನ ರೊಡನೆ ।
ಕಮಲ ಕರ್ನಿಕೆ ವಿಜಯ ವಿಠ್ಠಲ ಸನ್ನಿಧಿ ।
ತ್ತಮ ಚತುರ ವಿಂಶತಿ ಕೋಟಿ ಜನರ ಪಡೆದ ॥ ೩ ॥

ಅಟ್ಟ ತಾಳ

ಇಪ್ಪತ್ತು ನಾಲ್ಕುಕೋಟಿ ದೇವ ಕುಲೋದ್ಭವ ।
ಒಪ್ಪದಿಂದಲೆ ವುಂಟು ಪ್ರಸಿದ್ಧಾ ಪ್ರಸಿದ್ಧಾ ।
ತಪ್ಪದೆ ತವು ತವು ಕಾರ್ಯವ ಮಾಡುತ್ತ ।
ವುಪ್ಪು ಯಿಲ್ಲದೆ ಚರವು ಭವಿಗಳಯ್ಯಾ ।
ಇಪ್ಪರು ಯಿವರಿಗಿಂದಧಿಕ ನವಕೋಟಿ ।
ಸುಪ್ಪವರ್ಣರು ತ್ರಿವಿಧ ಅಧಿಕಾರರು ।
ಒಪ್ಪುತಾ ಪ್ರತಿದಿನ ಹರಿಗೆ ಸರ್ವಸ್ವ ಸ ।
ಮರ್ಪಣೆ ಮಾಡೋರು ಸಕಲ ವಿಷಯದಲ್ಲಿ ।
ಸರ್ಪಶಯನ ನಮ್ಮ ವಿಜಯ ವಿಠ್ಠಲ ಜಗ ।
ದಪ್ಪನಾಗಿ ಅವರವರ ಪಾಲಿಸುವ ॥ ೪ ॥

ಆದಿ ತಾಳ

ಋಷಿಗಳು ಸಹಿತವಾಗಿ ಗಣನೆ ಮಾಡಿ ಯೆ ।
ಣಿಸು ನೂರಾಮೂವತ್ತು ಮೂರು ಕೋಟಿ ಗಳನ್ನು ।
ಹಸನಾಗಿ ಯಿವರಿವರ ಭಕ್ತಿ ಜ್ಞಾನ ಕರ್ಮ ।
ಬೆಸನೆ ತಿಳಿದು ಪ್ರಸನ್ನೀಕರಿಸಿ ಕೊಂಡು ಬಾಳು ।
ಎಸವ ಸಪ್ತ ಭವನ ಮೇರು ಧ್ರುವ ಲೋಕ ರಂ ।
ಜಿಸುವ ಸ್ವರ್ಗಾದಿ ಸರ್ವ ಬ್ರಹ್ಮಾಂಡಾವರಣ ತನಕ ।
ಎಸಳು ಮತಿಯಿಂದ ತವು ತಮ್ಮ ಯೋಗ್ಯ ಸ್ಥಾನ ।
ವಸತಿ ಯಾಗಿಪ್ಪರು ಅನೇಕ ಬಗೆಯಿಂದ ।
ಮಸಕವೆ ನೋಡುವದು ಪ್ರಧಾನ ಸ್ಥಳವೆರಡು ।
ಬಿಷಜಾಪ್ತ ಮಂಡಲ ಶರೀರಸ್ಥರೆಂದು ।
ಕುಶಲ ಮತಿಯಿಂದ ಭಜನೆ ಮಾಡೆಲೋ ಮನುಜಾ ।
ಪುಸಿಯಲ್ಲ ಯಿದೆ ಯಿದೆ ಸಾಧನ ಸಾಧ್ಯ ಸಿದ್ಧ ।
ವಶವಾಗುವದು ಸುಲಭ ವಿದ್ಯ ಪ್ರಾಪ್ತಿ ಯೆನ್ನು ।
ಪಶು ಪಾಲಕ ನಮ್ಮ ವಿಜಯ ವಿಠ್ಠಲ ರೇಯ ।

ಶುಗಳಂತೆ ಯಿಂತು ನೆನೆದವರ ಸಲಹುವಾ ॥ ೫ ॥

ಜ ತೆ

ತೃಣಾಂತ ವಿಡಿದು ಬೊಮ್ಮಾದಿ ಪರಿಯಂತ ನೆನೆದು ।
ನನ್ನನಾಗೋ ವಿಜಯ ವಿಠ್ಠಲ ನಿಂದ ॥ ೬ ॥

## ಕಠಿಣ ಶಬ್ದಾರ್ಥ ೧೦ ನೇ ಸುಳಾದಿಯಲ್ಲಿ

ತೃಣರಾಜ – ವೃಕ್ಷ, ಮರ (ತಾಳೆಯಮರ) ಅವಿಭೋಕ್ತರು – ನಿರಂಶರು. (ಅನೇಕರೂಪಗಳಿಂದ ಭೋಗ – ವಿಲ್ಲದವರು) ವೃತ್ತಿಜ್ಞಾನ – ಶಾಸ್ತ್ರಜನ್ಯಜ್ಞಾನ ಬಾಹ್ಯಜ್ಞಾನ. ಸಾಂಶರು – ಅನೇಕ ರೂಪ ತಗೆದು ಕೊಳ್ಳತಕ್ಕವರು. ಒಬ್ಬಣಿಸು – ವರ್ಣಿಸು. ಕಾರ್ಮಿಕ – ಕರ್ಮಜರು. ಲೋಕಾಗ್ನಿ ತನುಜ – ಪ್ರಕಾಶಮಾನನಾದ ಮುಖ್ಯ ಅಗ್ನಿ ಪುತ್ರ ಪಾವಕನು. ಪವಣೆಯಿಂದ – ಪವಣೆಯಿಂದ ಪ್ರಮಾಣದಿಂದ. ಶತ ಕವ್ಯ ಭೋಕ್ತರು – ನೂರು ಜನ ಪಿತೃಗಳು. ಚರಮ ಭವಿಗಳು – ಚರಮ ದೇಹಿಗಳು – ಕೊನೆಯ ದೇಹ ವುಳ್ಳವರು ಸುಪ್ರವಣರು – ದೇವತೆಗಳಲ್ಲಿ ವೊಂದು ಭೇದ. ಬೆಸನೆ – ಮರ್ಮ ವಿವರ ಎಸಳುಮತಿ – ದ್ವಿವಿಧ ಜ್ಞಾನ ಹರಿಸರ್ವೋತ್ತಮಾದಿ ಭೇದಜ್ಞಾನ ಕೋಮಲಮತಿ



# ಇದರ ವಿವರ ಚತುರ ಬಗೆ

| | | |
|---|---|---|
| (೧) | ೩೩೦೦ | ಮುಖ್ಯತಾತ್ವಿಕರು ಮೂರು ಸಾವಿರದಾ ಮುನ್ನೂರು ಜನ । |
| | ೧೨೦ | ಬ್ರಹ್ಮಾದ್ಯರು ನೂರಾಯಿಪ್ಪತ್ತು ಜನ ಪದಸ್ಥರು |
| | ೩೧೮೦ | ಋಭುಗಣರು ಮೂರು ಸಾವಿರದಾ ನೂರಾಎಂಭತ್ತು ಜನ |
| | ೩೩೦೦ | |
| (೨) | ೨೯,೭೦೦ | ಅಮುಖ್ಯ ತಾತ್ವಿಕರು ಪಾವಕಾದಿ ಶನಿ ಪರಿಯಂತ ಇಪ್ಪತ್ತೊಂಭತ್ತು ಸಾವಿರದಾ ಏಳುನೂರು |
| (೩) | ೮,೯೯,೬೭೦೦೦ | ಆತಾತ್ವಿಕ ಜನರು ಎಂಟುಕೋಟಿ ತೊಂಭತ್ತೊಂಭತ್ತು ಲಕ್ಷ ಅರವತ್ತೇಳು ಸಾವಿರ ಜನ ಇದರಲ್ಲಿ ಮೂರುವರೆ ಕೋಟಿ ತೀರ್ಥಾಭಿಮಾನಿಗಳು |
| | ೯,೦೦೦೦೦೦೦ | ಒಟ್ಟು ನವಕೋಟಿ ದೇವತೆಗಳು ತಾತ್ವಿಕರು ಮುಖ್ಯಾಮುಖ್ಯರು |
| (೪) | ೨೪,೦೦೦೦೦೦೦ | ಆಜಾನುಜದೇವತೆಗಳ ಪ್ರಭೇದ ೨೪ ಕೋಟಿ |
| | ೩೩,೦೦೦೦೦೦೦ | |
| (೫) | ೧೦೦,೦೦೦೦೦೦೦ | ನಾರದಾದಿ ನೂರು ಕೋಟಿ ಋಷಿಗಳು |
| | ೧೩೩,೦೦೦೦೦೦೦ | ಇದರಲ್ಲಿ ೧೦೦ ಜನರು ಉತ್ತಮರು ಸಹ ಒಂದು ನೂರಾ ಮೂವತ್ತು ಮೂರು ಕೋಟಿ ಜನರ ವಿವರ ವಿದು. |

ತ್ರಿಬಗೆ ೧ ದೇವ ೨ ಋಷಿಗಂಧರ್ವ ೩ ಮನುಷ್ಯೋತ್ತಮ

# ೧೧ ತಾರ ತಮ್ಯ ಕಲ್ಪ ಸಾಧನ ಒಂದು ಕಲ್ಪದಲ್ಲಿ ಜೀವರುಗಳ ಸಂಖ್ಯಾ ಬಿಂಬದರ್ಶನ ಕ್ರಮ ಬಿಂಬ ಸ್ಪಷ್ಟತ್ವ ಸೂಳಾದಿ

**ರಾಗ ಭೈರವಿ ತಾಳ ಧ್ರುವ**

ತೃಣ ಪ್ರಾರಂಭ ಮಾಡಿ ಪರಮೇಷ್ಠಿ ಪರಿಯಂತ ।
ಎಣಿಸಿ ಗುಣಿಸುವದು ತಾರ ತಮ್ಯದಿ ।
ಗಣನೆ ವುಂಟು ಕೇಳೊ ವೊಂದೊಂದು ಬೊಮ್ಮಾಂಡಕ್ಕೆ ।
ಅನುಮಾನ ಮಾಡಸಲ್ಲಾ ಗುಣವಂತರು ।
ಜನಿಸುವರು ಜನ್ಮ ಭಾವಿ ಯೋಗ್ಯತ ಸಾ ।
ಧನ ಜೀವಿಗಳು ಪ್ರವಹದಂತೆ ।
ವನಜ ಸಂಭವನೊಬ್ಬ ಸಂಪೂರ್ಣ ಬಿಂಬ ದ ।
ರ್ಶನ ಕಾಂಬಾ ಸರ್ವದಾ ಬಹುಪ್ರಕಾರ ।
ಅನಿಲ ದೇವನು ಮುಖ್ಯ ವುಳಿದವರಿಗಿಂತ ।
ಮನಧಿಷ್ಟಿಯಲ್ಲಿ ಸ್ಪಷ್ಟತ್ವ ಭೇದ ।
ದಿನ ದಿನ ದಲ್ಲಿ ಯನ್ನಿ ಮುಕ್ಕಾದ ತೊಂಭತ್ತೆಂಟು ।
ಜನರು ಲಾತವ್ಯರೆಂದು ಕರೆಸುವರು ।
ಎಣಿಕೆ ಮಾಡಿ ಇಲ್ಲಿಗೆ ಶತ ಜನರನ್ನು ನಿತ್ಯ ।
ಘನವಾಗಿ ಯೋಗ್ಯತಾ ಅಪರೋಕ್ಷವೋ ।
ಇನಿತು ನೋಡಿರೊ ಮಿಗಿಲಾದ ಶತ ಜನ ಸಾ ।
ಧನ ದೇಹದವರೆಂದು ಕೊಂಡಾಡಿರೊ ।
ಅನಿಲ ವಿರಂಚಿ ಹರಿಯಿಂದಲೆ ವುತ್ಪತ್ತಿ ।
ಜನನ ಯಿಲ್ಲವೊ ಕಾಣೊ ಅನ್ಯರಿಂದ
ವನಜ ಸಂಭವ ವಾಯು ಯಿದ್ದಲ್ಲಿ ಸರ್ವರು ।
ಮನೆ ಮಾಡಿ ಕೊಂಡಿಪ್ಪರು ಹರಿ ಕೃಪೆಯಲಿ ।

ತೃಣ ಸ್ವರೂಪದಲ್ಲಿ ಅಣಲವ ಕಾಲ ಬಿಡದೆ |
ಗುಣ ರೂಪ ಕ್ರಿಯಾದಲ್ಲಿ ಹರಿ ದರುಶನ |
ವನಜ ಭವಾಂಡದೊಳಗೀರ್ವರಿಗಧಿಕಾರ |
ಅಣುವಾಗಿ ಯಿಪ್ಪುದು ತತ್ವ ಸಹಿತ |
ಗುಣ ತ್ರಯ ಪರಿಯಂತ ಅಂಶಿ ಪ್ರಕಾಶ ವ್ಯಾಪ್ತಿ |
ಸನುಮತ ವೇಳೆ ಅಂತಃಕರಣ ಜನ್ಯ ॥
ಜನನವೆ ಯಿನ್ನೂರು ಜನಕೆ ಪುಳಿದ ಋಜು |
ಗಣವೆಲ್ಲ ಅಸ್ಪೃಶ್ಯರಾಗಿಪ್ಪರೊ |
ಅನುದಿನ ಯಿವರೆಲ್ಲ ಜ್ಞಾನವಂತರೊ ಸ |
ಜ್ಜನ ಶಿರೋಮಣಿಗಳೊ ನಿರ್ದೋಷರೊ |
ಗಣನೆ ಯಿಲ್ಲದ ರೂಪ ತೆತ್ತ ಕಾಲಕ್ಕು ಸು |
ಗುಣ ವಾರಿಧಿಗಳೆನ್ನು ಪ್ರಳಯ ಸಹಿತ |
ಕ್ಷಣ ವೊಂದಾದರು ಯೀ ಜನಕೆ ಲೇಶಮಾತ್ರ |
ದನುಜಾವೇಶವಿಲ್ಲ ಯೆಲ್ಲಿದ್ದರು |
ಇನಕೋಟಿ ತೇಜ ನಮ್ಮ ವಿಜಯ ವಿಠಲ ನಂಘ್ರಿ |
ವನಜ ಧ್ಯಾನವನು ಮಾಳ್ಪರು ಅಧಿಕಾಧಿಕವಾಗಿ ॥ ೧ ॥

ಮಟ್ಟ ತಾಳ

ಗರುಡ ಶೇಷಾದಿಗಳ ಗಣ ವುಂಟು ಪು |
ಷ್ಕರ ಪರಿಯಂತವು ಯೆಣಿಕೆ ಮಾಡಿದರು ವಿ |
ಸ್ತರ ಮಹಿಮೆಗಳೆನ್ನು ಯಿವರಿವರ ಜನನ |
ತರ ತಮ್ಯದನುಸಾರ ಅಪರೋಕ್ಷ ಸಾಧನ |
ಶರೀರಗಳೆನ್ನು ಪೊಂದಾನಂತವಾಗಿ |
ಪರಿಮಿತ ಅಂಶಗಳು ಮನಸ್ತತ್ವದ ತನಕಾ |
ನಿರುತ ವ್ಯಾಪ್ತಿಗಳಯ್ಯಾ ಯಿದರೊಳು ಖಗ ಸರ್ವೇ |
ಶ್ವರ ಅಹಂಕಾರದಲ್ಲಿ ಸ್ಥಿರವಾಗಿ ಯಿದ್ದು ತತ್ವದ್ವ್ಯಾಪಾರ |
ಚರಿಸುವರು ಬಿಡದೆ ಸಾಧನ ಅಪರೋಕ್ಷ |

ತಿರೋಭಾವನೆ ಯಿಲ್ಲ ಕಲ್ಪ ಕಲ್ಪನೆ ಭೇದ ।
ಹರಿ ದರ್ಶನದಲ್ಲಿ ಕ್ರಮೇಣ ಅಭಿವೃದ್ಧಿ ।
ಚರಮ ಶರೀರಕ್ಕೆ ಪೂರ್ಣ ಭಕುತಿ ಯೋಗ್ಯರು ।
ಅರಿವದು ಇವರಿಗೆ ಅರ್ಗ್ಯಜ್ಞ ಕಾಲಕ್ಕೆ ।
ಗರುವ ತನವೆ ಯಿಲ್ಲ ಅವತಾರಾವೇಶ ।
ಧರೆಮೇಲೆ ಬಂದಾಗ ಅಸುರಾವೇಶದಿಂದ ಮಾನಿಸಾನ್ನ ವೃಣಲು ।
ವರವು ಪುಟ್ಟುವದು ಅವತವರ ಯೋಗ್ಯತ ಕಾಲ ಭೇದ ವೆನ್ನಿ ।
ಪರಮ ಮುಖ್ಯಸ್ವಾಮಿ ವಿಜಯ ವಿಠಲ ರೇಯ ।
ಸರಸಿಜಾಂಡದೊಳು ಯಿಾ ಪರಿ ವ್ಯಾಪಾರ ಮಾಳ್ಪ ॥ ೨ ॥

ತ್ರಿವಿಡಿ ತಾಳ

ಗರುಡ ಪನ್ನಗ ಜೀವರು ಅಪ್ರಕೃತ ಯಿಾರ್ವರು ।
ಹರಿ ಯೆನ್ನಿ ಗುಣ ರೂಪ ಕ್ರೀಯಾದಿಗಳಲ್ಲಿ ।
ತರ ತಮ್ಯವೆ ವುಂಟು ಭಿನ್ನ ಚರಿತೆ ನೋಡು ।
ಚರಿಸುವರು ವೊಂದೊಂದು ನೀತಿಯಲ್ಲಿ ।
ಸುರಪಸ್ಕರ ಪದಸ್ಥರು ನಾಲ್ವತ್ತು ಜನ ಅಹಂ ।
ಪುರುತ ಮೂವತ್ತಾರು ಜನರು ಸಿದ್ಧಾ ।
ಗುರು ಮನು ಮುಂತಾದ ಜನಪದಸ್ಥರು ಮೂವ ।
ತ್ತೆರಡು ಸಿದ್ಧ ಮೇಲೆ ಯಿಪ್ಪತ್ತು ನಾಲ್ಕು ಜನ ।
ಮರೀಚಿಗಳೆನ್ನು ಸೂರ್ಯಾದ್ಯರು ಯಿಪ್ಪತ್ತು ।
ವರುಣ ನಾರದ ಬಿಡಿದು ಮಿತ್ರಾದಿಗಳ ತನಕ ।
ನೆರೆದರೈ ಹದಿನೆಂಟು ಹದಿನೆಂಟು ಜನರು ।
ತರುವಾಯ ವೃಕ್ಷ ಶೇಷರು ಹದಿನಾರು ವಿ ।
ವರಿಸುವೆ ಯಿವರೊಳು ಗಣ ತಾರತಮ್ಯವೋ ।
ಪರಮೇಷ್ಠಿ ಮಾನಸ ಪುತ್ರರು ಹದಿನಾಲ್ಕು ।
ಪರಿಜನ್ಯಾರಂಭಿಸಿ ಪುಷ್ಕರಾಂತ ।
ಯೆರಡಾರು ಜನರೆನ್ನು ಸಮ ಜೀವರೊಂದೊಂದು ।

ಮರಳೆ ಕರ್ಮ ದೇವತೆಗಳೀಪ್ಪೈದರೋ ।
ಅರಸುಗಳೊಬ್ಬಬ್ಬರೆಂಟು ಮಂದಿ ಗಣಿತ ॥
ಅರಿಕೆ ಯಿಲ್ಲದೆ ಸುರರು ಅಗ್ನಿಪುತ್ರರು ಮಿಕ್ಕ ।
ವರು ಬ್ಯಾರೆ ಬ್ಯಾರೆ ಆರೇಳು ಮಂದಿ ।
ಸುರಗಂಧರ್ವರು ನಾಲ್ಕು ಮರ್ತ್ಯಾರಂತ ತೃಣ ಜೀವಕ್ಕೆ ।
ಪರಿಮಿತ ಯಿಲ್ಲವೋ ನಿರಂಶರೊ ।
ಹರಿಯೇ ಯಿಾಪರಿಯಿಂದ ಕಲ್ಪ ಕಲ್ಪಕೆ ನಿಂ ।
ದಿರದೆ ಪುಟ್ಟಿಸುತಿಪ್ಪಾ ಅಸ್ಪೃಜ್ಞರಾ ।
ಕರುಣಾಕರ ಮೂರ್ತಿ ವಿಜಯ ವಿಠಲ ರೇಯಾ ।
ನಿರವೈಗರ ಕೂಡ ಯಿಂತು ನಲಿದಾಡುವಾ ॥ ೩ ॥

ಅಟ್ಟ ತಾಳ

ಇದರೊಳು ಕ್ರಮವುಂಟು ವೊಂದೊಂದು ಜನ ತಮ್ಯ ।
ಪದವೀಯಸಾರಿ ವಿಲಿಂಗರಾದ ಮೇಲೆ ।
ಒದಗಿ ಬಾಹೋರು ಸಲಿಂಗರು ವೇಗದಿ ।
ನದಿ ಪ್ರವಾಹದಂತೆ ಕಾಲ ವ್ಯವಧಾನ ।
ವಿಧಿ ಶಿವ ಮಿಕ್ಕಾದ ಜನರೆಲ್ಲ ಜತ್ತಾಗಿ ।
ಮಾದದಿಂದ ಸೋಪಾನ ಬಂದಂತೆವೋ ।
ಯಿವರಲ್ಲಿ ಪೂರ್ಣ ವಿಭೂತಿ ಲಕ್ಷಣ ನವ ।
ವಿಧ ಭಕುತಿಯುಳ್ಳ ಚರಮ ಶರೀರಿಗ ।
ಉದುಭವಿಸುವರು ವೊಬ್ಬರೊಬ್ಬರು ಮುಂದು ।
ಇವರ ತರುವಾಯ ಅಸರೀರೀಕ್ಷನಾದ ಗಣದ ಮಧ್ಯದಲ್ಲಿಗೆ ।
ಪದವುಲ ಸಂಖ್ಯೆಗೆ ವೊಂದೊಂದು ಕಡಿಮೆ ಜೀತ ।
ನದ ಲೆಕ್ಕವ ನೋಡು ಸ್ಪಷ್ಟತ್ವದಲ್ಲಿಭೇದ ।
ಇದರಲ್ಲಿ ಸಾಧನ ಸಾಧ್ಯ ಪದಸ್ಥ ತ್ರಿ ।
ವಿಧವೆನ್ನು ಬಿಂಬ ಬಿಂಬೋಪಾಸನೆ ಅಧಿ ।
ಕಾಧಿಕವಾಗಿ ಮಾಡುತಲಿಪ್ಪರು ।

ಪದುಮ ಭವಾಂಡ ಸಮೇತ ತೃಣಾದ್ಯರ ।
ಹೃದಯಸ್ಥ ಮೂರ್ತಿಯು ಉಚಿತ ಜನ್ಮದಲ್ಲಿ ।
ಅಧಿಕಾರ ತನದಿಂದ ಯೋಗ್ಯತಾನುಸಾರ ।
ನಿದರುಶನ ಅನುಕ್ರಮವಾಗಿ ಪ್ರೊಂದೊಂದು ।
ಇದನೆ ಲಾಲಿಸುವದು ಸೋತ್ತಮರಬಿಟ್ಟು ।
ಆದಿಮೊದಲಾಗಿ ತಮಗಿಂತ ನೀಚರ ।
ಬಧಿಯಲ್ಲಿ ಯಿದ್ದ ವಸ್ತುಗಳೆಲ್ಲಾ ಕಾಂಬೋರು ।
ಮದಮತ್ಸರಗಳಿಲ್ಲ ದುಷ್ಪ್ರಾರಬ್ಧ ನ್ರೊ ।
ಪದು ನೋಕುವರು ದೈತ್ಯಾವೇಶ ವರ್ಜರು ಸ ।
ರ್ವದ ಹರಿ ವರುಶನ ಅಪರೋಕ್ಷ ಕಾಲಕ್ಕೆ ।
ಉದಧಿ ತೆರೆಯಂತೆ ಪುಸ್ಕರ ವಿಡಿದಿನ್ನು ।
ಪದುಮನಾಭನ ವಾಹನ ಪರಿಯಂತರ ।
ಇದೇ ಸಿದ್ಧ ರವಿಮಂಡಲದಂತೆ ಕಾಂಬೋರು ।
ಮಧ್ವವೈರಿ ವಿಜಯ ವಿಠಲ ರೇಯನ ಪಾದ ।
ಪದುಮವೇ ಗತಿಯೆಂದು ಹೇಳಿ ಕೇಳುತ ದೃಢಾ ॥ ೪ ॥

### ಆದಿ ತಾಳ

ತೃಣ ಖಗ ಮೃಗಾದಿಗಳು ಹೃದಯದಲ್ಲಿ ನೋಳ್ಪರು ।
ಮನುಜೋತ್ತಮರು ಮಂಟಪ ಪೀಠಾವರಣಸ್ಥರ ।
ಮನದಲ್ಲಿ ನೋಳ್ಪರು ಯಿವರ ತರುವಾಯ ।
ಜನಪತಿ ಮರ್ತ್ಯಗಂಧರ್ವರು ಚನ್ನಾಗಿ ।
ತನುವಿನೊಳಗೆ ಸಪ್ತಸ್ಥಾನದಲ್ಲಿ ಸುಷು ।
ಮ್ನಾನಾಡಿ ತದ್ಗತ ಹರಿರೂಪಗಳು ಮೂರೇ ।
ಶನ ಸಹ ಕಾಂಬುವರು ಯಿವನೇಲಿ ಅಜಾನಜರು ।
ಗುಣಿಸು ತ್ರಿನಾಡಿವಿಡಿದು ಸರ್ವ ದೇಹವಸ್ತಿ ।
ಶನಿ ಪುಸ್ಕರಾದಿ ಜೀವ್ಯ್ಮವಿಡಿದ ತದ್ಗತ ಹರಿಯು ।
ಇನಿತು ನೋಡುವರಯ್ಯಾ ಆತತ್ವನಾಭಿಕರು ।

ಮಿನಗುವ ವಿರಾಟ ರೂಪ ಸಮೇತ ನೀಕ್ಷಿಸುವರು ।
ನೆನನೆನದು ಮುಂದೆ ಆಪ್ರತೀಕಾಲಂಬರು ।
ಘನವಾಗಿ ಕರ್ಮಪ ಇಂದ್ರ ಪರ್ಯಂತ ।
ಮನಸ್ಸಿಗ್ಗ ಕಡೆಮಾಡಿ ಮತಿಯಲ್ಲಿ ನೋಡುವರು ।
ವಿನುತ ನಂದನ ರುದ್ರ ಅಹಂಕಾರದಲಿ ಯೆನ್ನಿ ।
ಅನಿಲ ಪಿತಾಮಹಾ ತಮ್ಮ ತತ್ವದ ತನಕಾ ।
ಕ್ಷಣ ಬಿಡದೆ ನೋಡುವರೊ ನಿರ್ದೋಷವಂತರಾಗಿ ।
ಎಣಿಕೆ ಮಾಡಲಿ ಯಿವರು ವ್ಯಾಪ್ತ ದರ್ಶಿಗಳು ।
ಗಣನೆ ಯಿಲ್ಲದೆ ಹರಿಯು ಅನುಗ್ರಹಕ್ಕೆ ಪಾತ್ರರು ।
ಪ್ರಣತ ಜನ ಮಂದಾರ ವಿಜಯ ವಿಠಲನ್ನ ವೃಷಾ ।
ಸನೆ ಮಾಡಿ ನೋಡುವರು ಅಪರೋಕ್ಷಕಾಲಕ್ಕೆ ॥ ೫ ॥

ಜತೆ

ಬ್ರಹ್ಮಸ್ತಂಭ ಪರಿಯಂತ ಕೊಂಡಾಡಿ ಮರೆಯದೆ ।
ಬ್ರಹ್ಮವಂದಿತ ವಿಜಯ ವಿಠಲ ಮುಂದಾಡುವ ॥ ೬ ॥

೧೧ ನೆ ಸೂಳಾದಿಯ ಕಠಿಣ ಶಬ್ದಾರ್ಥ

ಲಾತವ್ಯರು - ಋಜುಗಳಲ್ಲಿ, ತೊಂಭತ್ತೆಂಟು ಜನರಿಗೆ, ಲಾತವ್ಯರೆಂದು ಹೆಸರು. ಮತ್ತು ಲಾತವ್ಯನೆಂದರೆ, ಅನೇಕ ಪದವಭಾವೀ ವಾಯುವಿಗೆ ಲಾತವ್ಯ, ನೆಂಬನಾಮ. ಅಸೃಜ್ಯರು - ಸೃಷ್ಟಿಗೆ ಬಾರದೆಇದ್ದವರು. ತಿರೋಭಾವ - ಇದ್ದ ಜ್ಞಾನಕ್ಕೆ ಮರವು ಬರೋಣ



# ೧೨ ಚತುರ್ದಶ ವಿಧ ತಾರ ತಮ್ಯ ಕರ್ಮ ಜ್ಞಾನ ಭಕ್ತಿ ಯೋಗಗಳ ಸಾಧನ ವಿಚಾರ. ಸಾಧನ ಕಲ್ಪ ಬಿಂಬದರ್ಶನ ಪ್ರಮಾಣ ಜ್ಞಾನವ್ಯಾಪ್ತಿ

## ರಾಗ ಶಂಕರಾಭರಣ ಧ್ರುವ ತಾಳ

ಸ್ವರಮಣ ಸ್ವತಂತ್ರ ಸುಗುಣ ಸಾಕಾರ ಸುಂದರ |
ಪರಬೊಮ್ಮ ಸರ್ವಜ್ಞ ವ್ಯಾಪ್ತ ವ್ಯಕ್ತಾವ್ಯಕ್ತ |
ನಿರುಪಾಧಿಕ ಭಕ್ತಪಾಲಾ ನಿಸ್ಸಂಗ ಅಪ್ರಾಕೃತ |
ಶರೀರ ನಿರವಕಾಶ ಪ್ರಮೇಯ ಭರಿತ |
ಹರಿ ಸರ್ವೋತ್ತಮ ನಿತ್ಯ ನಿಖಿಳೈಶ್ವರ್ಯ ಭೂಮಾ |
ಸರ್ವದ ಲಿಂಗ ಸೂಕ್ಷ್ಮ ಸ್ಥೂಲ ದೇಹದ ತತ್ವದಲ್ಲಿ |
ಪೊರೆವ ಗೋಸುಗ ವಸತಿ ಯಿಪ್ಪ ಈಶಾ |
ಪರಿಪೂರ್ಣ ಪ್ರಭು ಪ್ರಣವ ಪ್ರತಿಪಾದ್ಯ ಇಂದಿರೆ |
ಯರಸ ಪರತತ್ವ ಸಾಲಾರೂಪ ಸುಪ್ರತಾಪ |
ಎರಡೊಂದು ಯೋಗ್ಯರನ್ನು ನೋಡಿ ಮುಕ್ತಿ ಜೀವರ |
ತರತಮ್ಯ ಚತುರ್ದಶ ಬಗೆ ನೇಮಿಸಿ |
ಹಿರಿದಾಗಿ ಅಂಶಾನಂದ ಬಲಜ್ಞಾನ ದೇಶ ಕಾಲ |
ಮರಳೆ ಅಪರೋಕ್ಷಲಯ ಸೃಷ್ಟಿ ಪದ |
ತರುವಾಯ ಆವೇಶ ಗುಣ ಲಕ್ಷಣ ಕಾಂತಿ |
ಹರಿ ಯಿಂತು ಮಾಡಿದ (ಸಾಂಪಕ್ಷ) ಸಾಂಶ ಜನಕೆ |
ನರಗಾಯಕ ವಿಡಿದು ತೃಣಾಂತ ಗುಣಿಸುವದೀ |
ಪರಿಯಾಗಿಪ್ಪುದು ಗ್ರಹಿಸಬೇಕು |
ಸರುವ ಜೀವರನ್ನು ಸೃಜಿಸಿ ತತ್ತತ್ಸಾಧನವ |
ಪರಿಮಿತ ಮಾಡಿ ಯಿಪ್ಪಾ ಸ್ವಾಭಾವಿಕಾ |
ಹರಿ ಸತ್ಯ ಸಂಕಲ್ಪ ಅನಾದಿ ಸಿದ್ಧಾ |

ಕರ್ಮ ಮರ್ಯಾದೆಯಿಂದಲಿ ಸಾಧನೆ (ಸದ್ಧರ್ಮ) ಮಾಡಿಸಿ !
ಕರಣ ಶುದ್ಧಿಯಾಗಲು ಭಕ್ತಿ ಪ್ರಸಾದ ಬಲು |
ಗುರು ವುಪದೇಶ ಜ್ಞಾನ ಪ್ರಭಲವಿತ್ತು |
ಹರಿ ತನ್ನ ಖಂಡಾಖಂಡ ಧ್ಯಾನ ಕ್ರಮದಿಂದ |
ದರ್ಶನ ಕೊಡುವ ಅನುಭವಪ್ರಕಾರ |
ಚರಿಸುವ ಕರ್ಮಜ್ಞಾನ ಭಕುತಿ ಯೋಗ್ಯರಿಗೆ ಶ್ರೀ |
ಯರಸನು ಪ್ರತ್ಯೇಕ ಪ್ರತ್ಯೇಕ ಜೀವರಲ್ಲಿ |
ವರ ಮೂರ್ತಿ ದರ್ಶನ ಸ್ವಯೋಗ್ಯರಿಗೆ-ತಾಸ |
ದ್ಗುರು ದೊರಕದಲೆ ಪ್ರಾಪ್ತಿಯಿಲ್ಲಾ |
ಸ್ಥಿರವಾಗಿ ತಿಳಿವದು ದೇಶಕಾಲ ಸಾಪೇಕ್ಷರ ಜೀ |
ವ ರಮಾ ಈಶ ಯಾ ಜಡೇಂದ್ರಿಯಂಗಳಿಗೆ |
ಸ್ಮರಣೆ ಪುಟ್ಟದು ಕಾಣೊ ಹರಿ ಗೋಚರಿಸುವನೆತ್ತ |
ಸ್ವರೂಪೇಂದ್ರಿಯಂಗಳಿಗೆ ಕೇವಲ ಸ್ಪಷ್ಟ |
ಹರಿಯಿಚ್ಛೆಯಿಂದ ಯಿಂತಾಗುವದೋ ತಾ |
ತ್ಪರ್ಯಾರ್ಥ ತಿಳಿವದು ಗ್ರಂಥದಲ್ಲಿ |
ವರ ಮೂರುತಿ ನಮ್ಮ ವಿಜಯ ವಿಠ್ಠಲ ರೇಯ |
ಶರಣ ಜನಕ್ಕೆ ತನ್ನ ಪುರದಲ್ಲಿಡುವನು | ೧

ಮಟ್ಟ ತಾಳ

ತೃಣ ಮೊದಲು ಮಾಡಿ ಮನುಜ ಗಂಧರ್ವರಿಗೆ |
ಎಣಿಸು ನಿರಂತರು ಪ್ರತೀಕಾಲಂಬರು ಯೆನ್ನಿ |
ಜನುಮ ಜನುಮ ಧರಿಸಿ ಪಾಪ ಪುಣ್ಯಗಳಿಂದ |
ಗಣನೆ ಯಿಲ್ಲದೆ ಯಿಲ್ಲಿ ಸುಖ ದುಃಖವನುಂಡು |
ಕೊನೆಗೆ ಬರುತ ಬರುತ ಅನಿಷ್ಟದಿಂದಲಿ ಕರ್ಮವನೆ ಯೆಸಗಿ |
ಅನುದಿನದಲ್ಲಿ ಮನಕೆ ಹೇಯವನು ಪುಟ್ಟಿ |
ಜನುಮ ಸಾಸಿರ ತೆತ್ತಿ ತತ್ಸಾಧನೆ ಮಾಡಿ |
ಇನಿತರೊಳಗೆ ಹತ್ತು ಜನಮದಲೀ ಜ್ಞಾನ |

ಮನಸಿಲಿ ಸಂಪಾದಿಸಿ ತನು ಶುದ್ಧನಾಗಿ ಸದ್ಭಕ್ತಿಮೂರು |
ಜನುಮಕೆ ಕೈಕೊಂಡು ಹೃದಯ ಸ್ಥಾನ ಪರು |
ಶನವಾಗುವದಯ್ಯಾ ವಾಸನ ಮಯವೆನ್ನಿ |
ಅನಿಲನ ದಯದಿಂದ ಸಹಸ್ರಧದಿಮೂರು |
ಜನುಮಕ್ಕೆ ವೈರಾಗ್ಯ ಜ್ಞಾನ ಭಕುತಿ ಪಡೆದು |
ಮನಸಿಜನಯ್ಯನ ಕಾಣುವರು ಬಿಡದೆ |
ಪ್ರಾಪ್ತನಾಗುವ ಕೇವಲ ನಿಷ್ಕಾಮದಲ್ಲಿ |
ಜನುಮ ಜನುಮಕ್ಕೆ ಕ್ರಮಾತು |
ನೆನಿಸುವರು ಇವರೆ ಕರ್ಮಯೋಗಿಗಳೆನ್ನು |
ಅನಿಮಿತ್ತ ಬಂಧು ವಿಜಯ ವಿಠ್ಠಲ ರೇಗು |
ಮನುಜ ಗಾಯಕ ತನಕ ಯಿಾಪರಿ ನಡಿಸುವ ॥ ೨ ॥

ರೂಪಕ ತಾಳ

ಭಗವದ್ದರ್ಶನ ಲಾಭ ತೃಣ ಕ್ರಿಮಿ ಕೀಟಕಾ |
ದಿಗಳ ಕಾಲ ಪರಿಮಿತ ಪಾದೋನ ಘಟಿಕಾ |
ಯುಗಳ ದೃಷ್ಟಿಗಳಿಂದ ನೋಳ್ಪರು ಪ್ರದೀಪದಿ |
ಬಗೆಯಾಗಿ ಬದರಿ ಪ್ರಮಾಣದಂತಿ ನಿತ್ಯಾ |
ಮುಗುಳೆ ವೃಕ್ಷ ಜೀವ ಘಟಿಕಾ ಪರಿಮಿತ ಪ |
ನ್ನಗ ತಲ್ಪನ್ನ ದಶ ದೀಪಾದನ್ನತ ಮನ |
ತೆಗೆಯದಲೆ ಕಾಂಬೋರು ಅಂಗುಟ ಮಾತ್ರ ಮಿತಿ |
ಖಗ ಮೃಗ ಪಶು ಮಿಕ್ಕ ಜೀವರಾಶಿಗಳು ಘ |
ಳಿಗೆ ಸಾರ್ಧಕಾಲ ನೂರು ದೀಪದ ಕಾಂತಿ |
ಮಿಗೆ ಮನುಜೋತ್ತಮರು ಚತುರ್ಗುಣೋಪಾಸಕರು |
ಅಗಣಿತ ಮಹಿಮನ್ನ ಮಿಂಚಿನೋಪಾದಿಯಲಿ ಹೃದ |
ಗಗನದಲಿ ನೋಳ್ಪರು ತಮ್ಮ ಯೆರಡು ಘಳಿಗೆ |
ಪೊಗಳಲೇನು ನೃಪರು ದಶಮಿಂಚಿನಂತೆ ಘ |
ಳಿಗೆ ಮೂರುಪರಿಯಂತ ಬಿಂಬನ ನಿರೀಕ್ಷಿಪರು |

ತಗಲಿ ಮನುಜ ಗಂಧರ್ವ ಜನ ನೋಡುವ |
ಬಗೆ ಕೇಳು ಯಿಪ್ಪತ್ತು ವಿಂಚಿನಂದದಿ ಘ |
ಳಿಗೆ ನಾಲ್ಕು ಸಿದ್ಧವೋ ತಮತಮ್ಮ ಸ್ಥೂಲ ಹೃ |
ದ್ಗಗನದಲ್ಲಿದರೊಳು ತಾರತಮ್ಯ ಪ್ರಕಾಶ |
ಯುಗ ಪೇಳುವದೇನು ಯಿವರ ಪರಿಯಂತ ಕ |
ಣ್ಣಿಗೆ ತೋರ್ಪ ಹರಿ ಮಂಟಪ ಸಹಿತ ಇಲ್ಲದಲೆ |
ಪಗೆದಲ್ಲಣ ನಮ್ಮ ವಿಜಯ ವಿಠ್ಠಲ ರೇಯ |
ಯುಗ ಯುಗದಲ್ಲಿ ಜ್ಞಾನ ವ್ಯಕ್ತಿ ಮಾಡಿ ಕೊಡುವಾ | ॥ ೩ ॥

ಝಂಪೆ ತಾಳ

ಏನಂಬೆ ಯಿಲ್ಲಿ ಪರಿಯಂತ ನಿರಂಕರು |
ನಾನಾ ಯೋನಿ ಜನ್ಮ ಯಿವರಿಗುಂಟು |
ಜ್ಞಾನ ಶೂನ್ಯರಯ್ಯಾ ಅಪರೋಕ್ಷದ (ತನಕ) ಪರಿಯಂತ |
ಕಾಣರು ಸತ್ಸಂಗ ಲೇಶಮಾತ್ರ |
ಮಾಣು ಯಿಗಾ ಪರಿಯಂತೆ ಮುಂದೆ ಕೇಳುವದು ಸುಪ |
ರ್ವಾಣ ಗಂಧರ್ವ ಕರ್ಮದೇವ ತನಕಾ |
ಜ್ಞಾನ ಯೋಗಿಗಳೆಂದು ಕರೆಸುವರು |
ಭಾನು ಮಂಡಲದಂತೆ ಕಾಂಬ ಸಾಂಶರು |
ಪ್ರಾಣಾಧಿಷ್ಠಾನದಲ್ಲಿ ಪ್ರಕಾಶಿಸಿಕೊಂಬಾ |
ನಾನಾ ಜನುಮ ಧರಿಸಿ ಅಂಶದಿಂದಲಿ ಬಳಲಿ |
ಜ್ಞಾನ ವಿರಹಿತರಾಗಿ ಭವದಲಿದ್ದು |
ಸ್ನಾನಾದಿ ಪುಣ್ಯದಿಂದ ಸದ್ಗತಿಬರಲು ನಿ |
ಧಾನಿಸಿ ಸತ್ಕರ್ಮ ನೂರುಜನ್ಮ |
ತಾನುಕೈಕೊಂಡು ಆಮೇಲೆ ಸಾವಿರಜನ್ಮ |
ಮೇಣು ಧರಿಸಿ ಜ್ಞಾನವಂತ ನಾಹಾ |
ಜ್ಞಾನ ಕರ್ಮದಿಂದ ಮುನ್ನೂರು ಜನ್ಮಕ್ಕೆ |
ತ್ರಾಣನಾಗುವ ಸದ್ಭಕ್ತಿಪ್ರಾಪ್ತಿ |

ಈ ನಿರಂತರ ಯಿನಿತು ಮಾಡಲಾಗಿ ಹರಿಯ |
ಕಾಣುವ ಉಪಾಯ ಇದು ಅಪರೋಕ್ಷವು |
ಹೀನ ವಾಗದೊ ನಿತ್ಯ ಅಭಿವ್ಯಕ್ತಿ ಹರಿ ರೂಪ |
ಭಾನು ಮಂಡಲ ಕಾಂತಿ ಶೋಭಿಸುವದು |
ಮಾಣದಲೆ ಆರು ಘಳಿಗೆ ಕಾಲ ಪರಿಮಿತ |
ಮಾನಸದಲ್ಲಿ ಹರಿಯು ನೋಳ್ಪರಯ್ಯಾ |
ಕ್ಷೀಣವಿಲ್ಲದೆ ಕೃಷ್ಣಾಂಗ ಸಂಗ ಗೋಪಿಯರು |
ಕಾಣುವರು ಘಳಿಗೆಂಟು ಸಹಸ್ರ ಐದು |
ಭಾನು ಮಂಡಲದಂತೆ ಮತ್ತೆ ಆ |
ಜಾಣ ಕೃಶಾನ ಪುತ್ರರು ಸೋಳಸಾವಿರ ಜನ |
ಈ ನಾಡಿ ಹತ್ತು ಪರಿಮಿತ ಅಯುತ ಮಂಡಲದಂತೆ |
ನಾನಾ ಪ್ರಕಾರದಲಿ ನೋಡುವರು |
ಮೌನಿಗಳಲ್ಲದೆ (ಮಾನಸಲ್ಲಿಂದ) ದೇವತೆಗಳು ಕೋಟಿ |
ಭಾನು ಮಂಡಲದಂತೆ ಅರ್ಧ ದಿವಸ ಕಾಂಬುವರು |
ಸಪ್ತ ದ್ವೀಪ ಲೋಕ ಸಹಿತ ವೈರಾಜ |
ಧ್ಯಾನದಲ್ಲಿ ಕಾಳತು ಭಕ್ತಿ ರಥ ದೀ ॥
ಜ್ಞಾನ ಯೋಗಿಗಳು ದ್ವಿವಿಧವುಂಟು ಗುಣಿಸುವರು |
ಗೌಣ ಅಧಿಕವಾಗಿ ಕ್ರಮ ವಿವರಾ |
ಆನಂದ ಮೂರುತಿ ನಮ್ಮ ವಿಜಯ ವಿಠ್ಠಲ ರೇಯ |
ಪ್ರಾಣನಾಗಿ ತನ್ನ ಭಕುತರನ ಪೊರೆವಾ ॥ ೪ ॥

ತ್ರಿವಿಡಿ ತಾಳ

ಭಕುತಿ ಯೋಗಿಗಳಾಗಿ ವರ ಪುಷ್ಕರಾದ್ಯರು ತಾ |
ತ್ರೈಕರೆಂದೆನಿಸುವರು ಈ ಕಾಲಕ್ಕೆ |
ಪ್ರಕಟ ವಾಗಿಪ್ಪರು ಅವರವರ ತಕ್ಕದ್ದು |
ಸುಖ ದುಃಖ ಕೊಡುವರು ಮೃತ್ಯುವಾರಿಂದ |
ಸಕಲ ತೃಣಾದ್ಯರು ಸ್ವಹೃದಯದಲಿ ಶ್ರೀ |

ಲಕುಮಿ ಅಂಸನ್ನ ನೋಳ್ಪರು ದೀಪದಂತೆ ।
ಅಖಿಳ ವೈಭವವಿಲ್ಲ ಮುಂಟಪ (ಪುಟ್ಟುವ) ಪರಿವಾರ ।
ತಕತಕ್ಕ ವಿಧವಿಲ್ಲ ಪ್ರಾರಂಭಕ್ಕೆ ।
ಅಕಳಂಕ ರಘುದಯ್ಯಾ ರುದ್ರಗಣ ಪರಿಯಂತ ।
ಚಕಿತ ತಾರತಮ್ಯ ಅರ್ಧ ಘಟಿಕಾ ।
ಸ್ವಕಳೇವರದಲಿ ನಿಂದುಕಾಂಬುವರಿಂತು ।
ತ್ವಕ್ಕಭಿಮಾನಿ ಮೊದಲಾದವರು ।
ಉಕುತಿ ಲಾವಿಸುವದು ಬಹು ಸ್ಥೂಲ ।
ಪ್ರತ್ಯಣಿಕೆಯಲ್ಲಿ ವಿಶೇಷ ದರ್ಶನ ಲಾಭ ।
ಪಕುತಿವಂತರು ಕಾಣೊ ಅಪರೋಕ್ಷಕಾಲಕ್ಕೆ ।
ತ್ರಿಕರಣ ಶುದ್ಧದಲಿ ತಮ್ಮ ಬಿಂಬಾ ಅ ।
ಧಿಕ ವಾಗಿ ಕೋಟಿ ಆರಂಭಿಸಿ ವಾರಿಜ ।
ಸಖನಂತೆ ನೋಳ್ಪರು ದಿನಾನಂತ ತನಕಾ ।
ಅಖಿಳೇಶ್ವರನ ಕಾಂಬೋರು ತಾರತಮ್ಯಾ ।
ಭಕುತಿ ಮಾತುರದಿಂದ ವಿಶಿಷ್ಟವು ।
ಮುಖ್ಯರಿಕ್ಕಾದ ಸತ್ವರ್ಗಗಳು ನಿಷ್ಠಾ ।
ಮುಕರಾಗಿ ಮಾಡುವರು ನಿಜರೂಪದಿ ।
ಭಕುತಿ ಗೋಪುಗವಲ್ಲ ಅಪ್ರತೀಕಾಲಂಬರ ।
ಚರ್ಕರು ಕಾಣೊ ಯಿಲ್ಲಿ ದ್ವಿವಿಧವಕ್ಕು ।
ಮುಕ್ಕಳ ಮಾಣಿಕ್ಯ ರಂಗ ವಿಜಯ ವಿಠ್ಠಲ ರೇಯ ।
ಮುಕುತಿಯ ಪಾಲಿಸುವ ಪ್ರಸಾದ ತ್ರಯದಿಂದ ॥ ೫ ॥

ಅಟ್ಟ ತಾಳ

ದಶಯೋಜನ ವ್ಯಾಪ್ತಿ ತೃಣ ಕೀಟಕಾದಿ ದ್ವಿ ।
ದಶ ಯೋಜನ ವ್ಯಾಪ್ತಿ ಪಕ್ಷಿ ಮೃಗಾದಿಗೆ ।
ಎಸೆವ ಮನುಜರಿಗೆ ಮಂಡಲ ಪರಿಯಂತ ।
ವಸುಮತೀಶ್ವರರಿಗೆ ಯೆಂಭತ್ತು ಯೋಜನಾ ।
ನಿಃಸಕದೆ ಮರ್ತ್ಯ ಗಂಧರ್ವ ಜನಕೆ ಯೆ ।

ಣಿಸುವದು ಯಿನ್ನೂರು ನಾಲ್ವತ್ತ್ಯೋಜನ |
ಪುಸಿಯಲ್ಲನಿರ್ಜರ ಗಂಧರ್ವರಿಗೆ ಮೇರು |
ಪೆಸರಾದ ಚಿರ ಪಿತೃರಿಗೆ ಭುವಲೋಕ |
ವಸತಿ ಅಂತ್ಯ ಭಾಗಕೃಷ್ಣಾಂಗಸಂಗ ಸಂಚ |
ರಿಸಿದ ಗೋಪೇರಿಗೆ ವೃಷ ಸ್ವರ್ಗವಿಂತು |
ತತ್ಸಮಾನ ಆಜಾನರಿಗೆ ದರ್ಶನ ಸ್ವರ್ಗಾಂತವೊ- ಸಂ |
ತತವಾಗಿ ಯೋಗ್ಯತಾ ಕ್ರಮಾತು |
ಮಿಸುಣಿಪ ವಿರಾಟ ವಿಗ್ರಹ ದರ್ಶನ ರಾ
ಜಿಸುವರು ಕರ್ಮ ದೇವತೆಗಳು ನಿರಂತರಾ
ಪೆಸರುಂಟು ಯಿಲ್ಲಿ ಪರಿಯಂತ ಸಾಂಶ |
ಪೆಸರು ಕೇಳಿ ದೇವ ದಾಸರು ಯೆಂದು |
ಚನ್ನಾಗಿ ದಶ ಯೋಜನದಿಂದ ಕರ್ಮದೇವರ ನೋಡೆ
ಹಸನಾದ ವಿಗ್ರಹ ಪೂಜಾಧಿಕಾರರು |
ಬೆಸಸುವೆ ಪುಷ್ಕರಾದ್ಯ ಶತಾಂತವೊ |
ಬಿಸಜ ಭವಾಂಡ ಬಹಿಪೃಥ್ವಿಯಿಂದ |
ಪಶವಲ್ಲ ಮಾನಸ ತತ್ವಾಂತ ಸಂತತ ನಿರೀಕ್ಷಿಸಿ ಧೇ |
ನಿಸಿ ವುಪಾಸನೆಯ ಮಾಡುವರು |
ಕುಸುಮ ನಾಭನ ಅನುಗ್ರಹಕೆ ಪಾತ್ರರು |
ಕುಶಲವಂತರೆ ಪರಿ ನೋಳ್ಪರಲ್ಲಿ ತರತಮ್ಯ |
ಬಿಸಿಗಣ್ಣ ಮಹದೇವ ಅಹಂಕಾರ ತತ್ವ ವ್ಯಾ |
ಪಿಸಿ ಕೊಂಡು ನೋಡುವ ಸಮಸ್ತ ಒಗೆಯಿಂದ |
ದಿಶ ಸಪುತ ದ್ವೀಪ ವನಧಿ ಪರ್ವತ ವ್ಯಾಗ |
ವಸುಮತಿರುಹ ವಾರಿಜಾರಿ ಸರ್ವ ಜೀವಾದಿ |
ಶಶಿ ಸೂರ್ಯ ಭುವಲೋಕ ಸ್ವರ್ಗ ಉಳಿದ್ದವೆಲ್ಲಾ |
ಎಸಳು ಸ್ಥೂಲ ಸೂಕ್ಷ್ಮ ಸರ್ವ ವಿಷಯಾಕರಿಸಿ |
ನಿಶಿ ಹಗಲೆನ್ನದೆ ಸಕಲ ಕಾಲ ದರ್ಶಿಗಳಾಗಿ |

ತ್ರಸರೇಣು ಮೊದಲಾದ ಅಣು ಪ್ರಹತ್ತಿನಲ್ಲಿ ।
ಬಿಸಿಜಾಕ್ಷನ ನೋಳ್ಪರು ಅನಂತ ಬಗೆ ।
ಶಶಿವರ್ಣಕಾಯ ಶ್ರೀವಿಜಯ ವಿಠ್ಠಲ ಸ್ವಾಮಿ ।
ನಸರಿಂದ ಸೇವ್ಯ ಮಾಹಾತ್ಮ್ಯ ಕಾಣೊ ಸರ್ವದಾ ॥ ೬ ॥

ಆದಿ ತಾಳ

ಗರುಡಾದಿಗಳಿಗೆ ಐವತ್ತು ಯಿಂದ್ರ ಜೀವರಿಗಿಪ್ಪತ್ತು ।
ಮರುತಾಹಂಕಾರ ಹದಿನೆಂಟು ಅನಿರುದ್ಧ ದಕ್ಷ ।
ದ್ಯರು ಗುರು ಮನು ಶಚಿ ರತಿ ಗೆರಡೆಂಟು ।
ಮರುತ ದ್ವಾದಶ ಹತ್ತು ಸೂರ್ಯ ಚಂದ್ರಾದ್ಯರು ।
ವರುಣ ನಾರದ ವಿಡಿಸು ಮಿತ್ರರಿಗೆ ವೊಂಭತ್ತು ।
ಎರಡೆರಡು ನಾಲ್ಕು ವೃಕ್ತ್ರಶೇಷರಿಗೆ ನಿಜವೆನ್ನಿ ।
ಮರಳೆ ಸನಕಾದಿಗಳಿಗೆ ಸಪ್ತ ಪರ್ಜನ್ಯ ವೂ ।
ಸ್ಮರ ತನಕ ಆರು ಕರ್ಮ ದೇವತೆಗಳಿಗೈದು ।
ಅರಿವದು ಅಜಾನುಜ ದೇವರು ಗೋಪಿಕಾ ಸ್ತ್ರೀ ।
ಯರು ಚಿರಪಿತರು ।
ಸುರ ಗಂಧರ್ವ ಮೂರರ್ಧ ಮೂರೆರಡು ।
ಅರಿವದು ನರಗಂಧರ್ವ ಮನುಜೋತ್ತಮ ತೃಣಾಂತ ವಾಗಿ ಯಿನಿತು ।
ಪರಿಮಿತಿ ಯುಂಟು ವೊಂದು ಪಾದೋನಪಾದ ರ್ಧವೂ ।
ಪರಮೇಷ್ಟಿ ಮಾನದಿಂದ ತಿಳಿವದು ತೃಣಾಂತಕೆ ।
ತರತಮ್ಯ ಅಪರೋಕ್ಷ ಚರ್ಮದೇಹ ಪರಿಯಂತ ।
ಪರಮ ಪುರುಷ ಹರಿ ವಿಜಯ ವಿಠ್ಠಲ ರೇಯ ।
ಕರುಣಾಂಬುಧಿ ಯಿಂತು ಸುಕೃತಿ ಮಾರ್ಗವ ಕೊಡುವಾ ॥ ೭ ॥

ಜತೆ

ಬೊಮ್ಮಜನಕ ನಮ್ಮ ವಿಜಯ ವಿಠಲ ಸರ್ವೋ ।
ತ್ತಮ್ಮನ ಹೃದಯದಲ್ಲಿ ನಿಲಿಸಿ ಧ್ಯಾನವ ಮಾಡೊ ॥ ೮ ॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

## ೧೩ ನೆ ಸೂಳಾದಿಯ ಕಠಿಣ ಶಬ್ದಾರ್ಥ

ನಿರವಕಾಶಪ್ರಮೇಯ - ಸಾಕಲ್ಯೇನ, ಜ್ಞಾನಕ್ಕೆ ಸಿಲುಕದವನು ಭೂಮ - ಪೂರ್ಣ, ಪ್ರತೀಕಾಲಂಬರು - ಸ್ವದೇಹಾದಿ ಪ್ರತಿಮೆಗಳಲ್ಲಿ, ದೇವರನ್ನು ಪೂಜಿಸುವರು, ಹಗೆದಲ್ಲಣ - ವೈರಿನಾಶಕ, ಸುಪರ್ವಾಣ - ದೇವ, ಬಿಸಜ ಭವಾಂಡ - ಬ್ರಹ್ಮಾಂಡ, ಬಿಸಿಗಣ್ಣ - ರುದ್ರ, ವನವಾತಿಗಾಹ - ವೃಕ್ಷ,

## ೧೪ ಸ್ವತಂತ್ರ ವಿಭಾಗದ ತಾರ ತಮ್ಯ ಸೂಳಾದಿ

### ರಾಗ ಪಂತುವರಾಳಿ ತಾಳ ಧ್ರುವ

ಆ ಶೂನ್ಯ ನಾಮಕ ಪೂರ್ಣ ಬ್ರಹ್ಮ |
ದೋಷ ರಹಿತ ಪೂರ್ಣೈಶ್ವರ್ಯ ||
ಈಶ ಸಮಗ್ರ ಪೂರ್ಣಾನಂದ |
ಭೂಷ ಸ್ವರೂಪ ಭೂತ ಅಪ್ರಾಕೃತ |
ಶ್ರೀ ಸತಿ ನಾಥ ತ್ರಿಗುಣಾ ತೀತ |
ದೇಶ ಕಾಲ ಸರ್ವ ಅವಿನಾ |
ಆಶೂನ್ಯ ನಾಮಕ ಪೂರ್ಣ ಬ್ರಹ್ಮ |
ರಾಶಿ ಜೀವಿಗಳನ್ನು ತನ್ನೊಳಗೆ |
ಲೇಶಾಯಾಸ ವಿಲ್ಲದೆ ಪೂರ್ಣ ಶಕ್ತ |
ವಿಸೇಸು ಕಲ್ಪಕೇ ಲೀಲಾ ಮಾತ್ರ |
ವಾಸ ವಾಗಿಪ್ಪ ನಿರ್ಲಿಪ್ತಾ ಸಂಗ |
ವಾಸುದೇವಾದಿ ರೂಪ ಕೇಶವ ಹೃಷೀಕೇಶ |
ಕೇಶಾ ಕೇಶಿ ಪಾದಾಂಗುಟ |
ವಿಲಾಸಲ ಜ್ಞಾನ ಪೂರ್ಣ ಸಂಪೂರ್ಣ |

ಹ್ರಾಸ ವೃದ್ಧಿ ವರ್ಜಿತ ವರಗಾತ್ರಾ ।
ಶಾಶ್ವಿತ ಸಾಬೊಮ್ಮ ಪತಿತ ಪರಾ ।
ಸುಷುಪ್ತಿಯಲ್ಲಿ ಯೇಕ ಮೇವ ।
ಕ್ಲೇಶನಾಶನ ಕಾರಣ್ಯ ಮೂರ್ತಿ ।
ವಿಶಾಲ ಗುಣಾನಂತ ಜಲಧಿ ।
ನಾಶರಹಿತ ಯುಗಪದಿ ರೂಪಾ ।
ವೈಷಮ್ಯ ನೈರ್ಘೃಣ್ಯ ಜ್ಞಾನಾತ್ಮಕಾ ।
ಈಸು ಮಹಿಮೆಯುಳ್ಳ ಅಣುವ ಹತ್ತು ।
ಅಶೇಷ ಅಂಶಿ ಅಂಶ ಸರ್ವ ಪೂರ್ಣಾ ।
ಯಶೋದಾ ನಂದನ ವಿಜಯ ವಿಠ್ಠಲ ಪ್ರ ।
ಕಾಶಾ ಅನ್ಯಪ್ರಕಾಶಾ ಗತ ಗತಿಪ್ರದಾತಾ ॥ ೧ ॥

ಮಟ್ಟ ತಾಳ

ಸಕಲ ಜೀವರನು ಸೃಜಿಸು ಯೆಂದು ಶ್ರೀ ।
ಲಕುಮಿ ರೂಪಾ ಅಂಭ್ರಣಿ ದೇವಿ ।
ಅಖಿಳ ಬಗೆಯಿಂದ ನೋಡಿ ತುತಿಸಲೆಂದು ಕರುಣದಿಂದಲಿ ।
ಮುಕುತಾ ಮುಕ್ತರು ಮುಕ್ತರ ಗಣ ದ್ವಿವಿಧಾ ।
ಭಕುತಾ ದ್ವೇಷಾ ಜನರ ಸಾಧನಾ ।
ಅಕಳಂಕ ಸ್ವಾಮಿ ಅನಾದಿ ಪುರುಷ ಪುರುಷ ಬೀಜ ಶೃತಿಗೇಯಾ ।
ಸುಕುಮಾರ ವಿಜಯ ವಿಠ್ಠಲಾ ।
ಸುಕೃತ ದುಷ್ಕೃತ ನಿಯಾಮಕಾ ।
ತಕ್ಕುದು ಮಾಳ್ಪ ಯೋಗ್ಯತಾದಂತೆ । ॥ ೨ ॥

ತ್ರಿವಿಡಿ ತಾಳ

ಅನಂತಾ ನಂತ ಗುಣ ಸ್ವಾತಂತ್ರಾತ್ಮಕ ।
ವಿನಂಬೆ ಸೃಷ್ಟಿಯ ಪ್ರಾರಂಭದಿ ।
ಜ್ಞಾನಮಯವಾದ ಅಭಿನ್ನ ಭಾಗದಿಂದ ।
ಅನಂತಾಂಶಾತ್ಮಕ ಗುಣವೆ ಹತ್ತು ।

ಆನಂದದಿಂದ ತೆಗೆದು ಚತುರ್ಭಾಗವನ್ನೆ ಮಾಡಿ |
ಅನಾದಿ ದೇವಾ ಯಿದರೊಳೇಕಭಾಗ |
ತಾ ನೋಡಿ ತೆಗೆದುಕೊಂಡು ಯೀ ವೊಂದು ಭಾಗದೊಳು |
ಎಣಿಕೆಗೆ ಹತ್ತು ಭಾಗ ಮಾಡಿ |
ಪ್ರಾಣನಾಯಕನಿಗೆ ನಾಲ್ಕು ಭಾಗ ಚತು |
ರಾನನಗೆ ಐದು ಭಾಗವಿತ್ತು |
ಶೇಷಾ ವುಳಿದ ಭಾಗ ವೊಂದು |
ತನ್ನ ಬಳಿಯಲಿ ಮಾಣದೆ ಯಿಟ್ಟು ಕೊಂಡು |
ಪುನರಾವರ್ತಿ ವೈನತೇಯ ಗಮನ ವಿಜಯ ವಿಠಲ ರೇಯಾ |
ನಾನಾ ವಿಚಿತ್ರ ಮಹಿಮಾ ಅಚಿಂತ್ಯಾದ್ಭುತ ಶಕ್ತಾ ||೩||

ಅಟ್ಟ ತಾಳ

ಮತ್ತೊಂದು ಸಾಂಶ ವುಳಿದ ಮೂರರೊಳು |
ಹತ್ತು ಭಾಗವ ಮಾಡಿ ಗರುಡಾಹಿರುದ್ರಾಗೆ |
ಇತ್ತನು ವಿಭಾಗ ದ್ವಯ ಮುಂದೆ ಸಾ |
ವಿತ್ರಿ ಭಾರತಿಗೆ ಸಾರ್ಧದ್ವಯ ಅಲ್ಲಿಂದ |
ವೃತ್ರಾರಿ ಕಾಮದೇವತಾ ಸಮುದಾಯಕೆ |
ಇತ್ತನು ತ್ರಯಭಾಗ ಮೇಲರ್ಧವುಳಿದ |
ಇತ್ತಲಾಲಿಸಿ ಕೇಳು ವೊಂದು ತದರ್ಧವು ||
ದೈತ್ಯಾವಳಿಗೆ ಯೆನ್ನಿ ಮಿಕ್ಕಾ ಭಾಗ ವೊಂದು |
ಮರ್ತ್ಯ ಗಂಧರ್ವ ಕ್ಷಿತಿಪ ಋಷಿ ಮನು |
ಜೋತ್ತಮ ಸಮಸ್ತ ಪ್ರಾಣಿಗಿತ್ತ |
ಉತ್ತಮ ಶ್ಲೋಕ ವಿಜಯ ವಿಠ್ಠಲ ರೇಯಾ |
ಹತ್ತೆರಡು ಭಾಗ ಯೀ ಪರಿ ಹಂಚಿದಾ |೪|

ಆದಿ ತಾಳ

ಚತುರ ಭಾಗದೊಳೆರಡು |
ಮಿತಿಯಾಯಿತು ಯೀ ಬಗೆ |

ಅತಿಶಯ ವುಳಿದ ಭಾಗ ಮಿ |
ಳಿತ ದಿಂದ ತ್ರಯ ಭಾಗ ಮಾಡಿ |
ಜಿತ ಶರೀರಳಾದ ತನ್ನ |
ಸತಿ ಲಕುಮಿಗೆ ವೊಂದು ಭಾಗಾ |
ಹಿತದಿಂದ ಪಾಲಿಸಿದಾ |
ಪ್ರತಿ ಪ್ರತಿ ಸೃಷ್ಟಿಗೆ |
ಅಚ್ಯುತದೇವ ಸ್ವರೂಪಾಂಶ ಪಾತ್ರ |
ಕೃತಿ ಪ್ರಕೃತಿ ಬದ್ಧರಿಗೆ ಕೊ |
ಡುತಲಿಪ್ಪ ಸ್ವತಂತ್ರ |
ಚತುರನಾಗಿ ಸರ್ವ ಜೀವ ಗತನಾಗಿ ತತ್ತತ್ಕಾಲ |
ಗತಿಯಾಂತೆ ಚೇಷ್ಟೆ ಮಾಡಿಸಿ |
ಮತಿಕೊಡುವ ಪಾಪ ಪುಣ್ಯಕೆ ||
ತುತಿಪೆ ಕೇಳು ವುಳಿದ ಭಾಗದಿ |
ಕ್ಷಿತಿಯೊಳಗೆ ಅವತಾರಾವೇಶಾ |
ಚತುರಾತ್ಮಮೂರುತಾ ಸರ |
ಸ್ವತಿ ಶ್ರದ್ಧಾ ಗರುಡಾದಿ ಕಾಮದೇವತಾ ಸಮುದಾಯ |
ದಿತಿಜ ಬಳಗ ಮನುಜೋತ್ತಮ ಸರ್ವ
ಇತರ ಜೀವಕ್ಕೆ ತತು ತತು ವುಳಿದಾ ಭಾಗದಿಂದಾ |
ರತಿ ಪತಿ ಪಿತಾ ವ್ಯಾಪಾರ ಮಾಡುವ |
ಚತುರ ಮೂರುತಿ ವಿಜಯ ವಿಠ್ಠಲಾ |
ಸತತ ತೂರ್ಯಾ ಜೀವನಾಮಕ || ೫ ||

ಜತೆ

ದತ್ತ ಸ್ವಾತಂತ್ರ ವೆಂಬೋದಿದೆ ಜೀವರಿಗೆ |
ಸತ್ಯ ಸಂಕಲ್ಪ ವಿಜಯ ವಿಠಲ ನಿಂದಾ || ೬ ||

೧ ವಿವರ

ಅನಂತಾನಂತಾತ್ಮಕ ಗುಣ ಸ್ವತಂತ್ರಾತ್ಮಕ ಸೃಷ್ಟಿಯ

ಪ್ರಾರಂಭದಿ,

ಜ್ಞಾನಮಯವಾದ ಅಭಿನ್ನ ಭಾಗದಿಂದ ಅನಂತಾಂಶಾತ್ಮಕ

ಗುಣ ಹತ್ತು ತೆಗೆದು ನಾಲ್ಕು ಭಾಗ ಮಾಡಿದ.

ಈ ನಾಲ್ಕರಲ್ಲಿ ಒಂದು ಭಾಗದೊಳಗೆ ೧೦ ಭಾಗ

ಈ ಪತು ಭಾಗ ಇದರಲ್ಲಿ

೪ ಭಾಗ ಪ್ರಾಣ ದೇವರಿಗೆ

೫ ಬ್ರಹ್ಮದೇವರಿಗೆ

೧ ತನ್ನ ಹತ್ತಿರ

೧೦

೨ ನೇ ಭಾಗದಲ್ಲಿ ಹತ್ತು ಭಾಗ ೧೦ ಮಾಡಿ ಇದರಲ್ಲಿ

೨॥ ಭಾಗ ಸರಸ್ವತಿ ಭಾರತಿಯರಿಗೆ

೨ ಗರುಡ ಶೇಷ ರುದ್ರರಿಗೆ

೩ ಇಂದ್ರ ಕಾಮಾದಿ ದೇವತೆಗಳಿಗೆ

೧ ಮರ್ತ್ಯ ಗಂಧರ್ವಾರಂಭಿಸಿ ಮನುಷ್ಯೋತ್ತಮರಿಗೆ

೧॥ ಭಾಗ ಕಲ್ಯಾದಿ ದೈತ್ಯರಿಗೆ

೧೦

ಸ್ವರೂಪಾಂಶವಾದ ಉಳಿದ ೨ ಎರಡು ಭಾಗದಲ್ಲಿ ಮೂರು ಭಾಗ ಮಾಡಿ

ಇದರಲ್ಲಿ ೧ ಭಾಗ ಶ್ರೀ ಲಕ್ಷ್ಮೀ ದೇವಿಗೆ

ಉಳಿದ ೨ ಎರಡು ಭಾಗದಿ ಕ್ಷಿತಿಯೊಳಗೆ ಅವತಾರ ಆವೇಶ

ಚತುರಾಸ್ಯ ಮರುತ ಇತ್ಯಾದಿ ಗಳಿಗೆ

ಕಠಿಣ ಶಬ್ದಾರ್ಥ

ಶೂನ್ಯನಾಮಕ = ಆಕಾಶದಂತೆ ಲೋಪಶೂನ್ಯನಾದವ, ದೈತ್ಯರ ಸುಖ ನಾಶಕನು; ಹೃಷೀಕೇಶ – ಇಂದ್ರಿಯಗಳಿಗೆ ಸ್ವಾಮಿ ವಿಷ್ಣು, ಪುರುಷಬೀಜ - ಸರ್ವರಿಗೆ ಮೂಲ ಕಾರಣ, ಶ್ರುತಿಗೇಯಾ – ವೇದಪ್ರತಿಪಾದ್ಯ. ವೈನತೇಯ – ಗರುಡ, ಅಹಿ - ಶೇಷ ದೇವರು, ವೃತ್ರಾರಿ - ಇಂದ್ರ, ತೂರ್ಯಾ – ತುರ್ಯಾವಸ್ಥಾ ನಿಯಾಮಕ

ವಾಸುದೇವ. ಜೀವನಾಮಕ – ಪ್ರಾಣಂ ಧಾರಯತಿ ಯಸ್ಮಾತ್ ಸಜೀವ:
ಪರಮೇಶ್ವರಃ ಯಾರಿಂದ ಪ್ರಾಣಧಾರಣ ವಾಗುವದೋ ಅಂಥ ಪರಮಾತ್ಮ

## ೧೪ ನೇ ಸತ್ವಾದಿ ಗುಣತ್ರಯ ವಿಭಾಗ ೨೪ ತತ್ವಗಳು ಅಭಿಮಾನಿ ದೇವತೆಗಳು ಪರಮಾಣು ಪುಂಜಗಳಲ್ಲಿ ಸಹ ಶ್ರೀಲಕ್ಷ್ಮೀದೇವೇರು ಮತ್ತು ಸಮಸ್ತ ದೇವತೆಗಳ ಉಪಾಸನಾ ಕ್ರಮ ಸಂಧಿ

**ರಾಗ ಭೈರವಿ ಧ್ರುವ ತಾಳ**

ನಿತ್ಯ ಮೂಲಪ್ರಕೃತಿ ಅಭಿಮಾನಿ ಶ್ರೀ ಭೂ ದುರ್ಗಾ ।
ಸತ್ಯವಾಗಿಪ್ಪಳು ಅಪ್ರಾಕೃತಗಳು ।
ಸತ್ವ ರಾಜಸ ತಮೊ ಮೂರು ಗುಣ ಮಿಳಿತ ।
ತತ್ವೇಶರಲ್ಲಿ ಯಿಲ್ಲ ನಿಧಾನಿಸು ।
ಅತ್ಯಂತವಾಗಿ ವಿಷ್ಣು ಬ್ರಹ್ಮ ರುದ್ರಾಭಿಧಾನ ।
ಕರ್ತೃ ಭಗವಂತ ನಿಯಾಮಕಾ ।
ಇತ್ತ ಲಾಲಿಸುವದು ಕಾರಣದಿಂದ ಮುಂ ।
ದತ್ತ ಬರಲು ಕಾರ್ಯ ಗುಣತ್ರಯವೊ ।
ಸತ್ವಗುಣಕೆ ವಾಸುದೇವ ಹಯವದನ ವಿಷ್ಣು ।
ಮೂರ್ತಿಗಳೆನ್ನು ರಜೋಗುಣ ಪ್ರ ।
ವರ್ತಕ ಜಾಮದಗ್ನಿ ಮಿಗಿಲಾದ ರೂಪ ತಮ ಪ್ರ ।
ವರ್ತಕ ರೂಪಂಗಳು ವರಹಾದಿಯು ।
ಸುತ್ತಿಸುವ ಮೂರು ಗುಣ ಬಹುಪರಿ ಪೊಳ ।
ವೃತ್ತಲಿವೆ ಸೂಕ್ಷ್ಮ ಮಧ್ಯ ಸ್ಥೂಲಾ ।

ಪ್ರತ್ಯೇಕ ಪ್ರತ್ಯೇಕ ಯಿದಕಭಿಮಾನಿಗಳು ।
ತತ್ವೇಶರು ವ್ಯಂಟಾನಂತ ರೂಪಾ ।
ಎತ್ತ ನೋಡಿದರತ್ತ ನೀಚಾಭಿಮಾನಿಗಳಿಗೆ ।
ಸೋತ್ತುಮ ಜೀವಿಗಳು ಪ್ರೇರಕರೊ ।
ಹತ್ತೆರಡು ನಾಲ್ಕು ತತ್ವಾಂತರದಲಿ ಗುಣ ಪರಮಾಣು ।
ಪೂರ್ತಿಯಾಗಿವೆ ನೋಡಿ ಕ್ರಮದಿಂದಲಿ ।
ಇತ್ತಂಡ ದಲ್ಲಿ ಯಿನಿತು ಬೆರತಿಪ್ಪ ಯೋಗವಕ್ಕು ।
ತತ್ವಾದಿ ಗುಣಕೆ ಸರ್ವರು ಅಭಿಮನ್ಯರು ।
ತತ್ವಂಗಳ ಲೆಖ್ಖ ಅವ್ಯಕ್ತ ಮಹಾನಹಂ ।
ತತ್ವಮನಸು ಜ್ಞಾನಕರ್ಮೇಂದ್ರಿಯು ।
ಹತ್ತು ಯಿವು ಕಾಣೋ ಯಿದರ ತರುವಾಯ ತ ।
ನ್ಮಾತ್ರಗಳೈದು ಯಿಷ್ಟೇ ಭೂತಂಗಳು ।
ಏತ್ತವಾಗಿಪ್ಪವು ಯೆಲ್ಲ ಕೂಡಿಸಿ ಯಿ ।
ಪ್ಪತ್ತು ನಾಲ್ಕು ತತ್ವ ಪ್ರಸಿದ್ಧವೊ ।
ಸತ್ವಸತ್ವ ಸತ್ವರಾಜಸ ಸತ್ವ ತಮ ।
ಮತ್ತೆ ರಾಜಸ ಸತ್ವ ರಜೋರಾಜಸ ವೃತ್ತಿ ರಾಜಸ ತಮ ತಮ ।
ಸತ್ವ ತಮರಾಜಸ ತಮತಮ ಯಿಾಬಗೆ ಗಣದ ಸ್ಥಿತಿಯು ।
ಉತ್ತಮೋತ್ತಮರೆಲ್ಲ ವಿವರಿಸಿ ವಿಸ್ತರಿಸಿ ।
ಅರ್ತ ದೂರಾಗುವರು ತ್ರಯ ಭಾಗದೀ ।
ಆತ್ಮದೊಳಗೆ ತಿಳಿದು ವುಪಾಸನೆ ಮಾಡುವರು ।
ವೃತ್ತಿ ನಿವೃತ್ತಿ ಮಾರ್ಗವನುಸರಿಸಿ ।
ತತ್ವ ತಾತ್ವಿಕರ ವುಪಾಸನೆ ಮಾಡುವರು ।
ಅತ್ಯಣು ಆರಂಭಿಸಿ ಮೂಲ ತನಕಾ ।
ಸತ್ವಾದಿ ಗುಣಂಗಳು ವುನ್ನತೋನ್ನತ ತಿಳಿದು ।
ನಿತ್ಯ ಧ್ಯಾನ ಸ್ಮರಣೆ ಮಾಡು ಮನುಜಾ ।
ಸತ್ಯ ಲೋಕೇಶನೊಬ್ಬ ರುಜುಮಾರ್ಗದವನೊ ತಾ ।

ರತ್ನ್ವವ್ಯವೇ ವುಂಟು ವುಳಿದ ಜನಕೆ ।
ಪೃಥ್ವಿ ಆರಂಭಿಸಿ ಗುಣತ್ರಯದ ವುಪಾಸ್ತಿ ।
ತತ್ತತ್ತದಾಕಾರ ಅವಾಂತರ ವ್ಯಾಪ್ತಿ ।
ಆತ್ಮ ವೊದಲಾದ ಹರಿಯೋಪಾಸ್ತಿ ।
ಪ್ರತ್ಯಕ್ಷಾಗಮ ಅನುಮಾನದಿಂದ ಗ್ರಹಿಸಿ ।
ಸತ್ವಾದಿ ಗುಣ ಶೂನ್ಯ ವಿಜಯ ವಿಠಲ ತನ್ನ
ಭೃತ್ಯರಿಗೆ ಯಿಂತು ಪ್ರೇರಿಸುವನು ದಯದಿ ॥ ೧ ॥

ಮಟ್ಟ ತಾಳ

ಮೂಲಾವತಾರ ಅಂಶಿ ಅಂಶ ಸರ್ವ ।
ಕಾಲ ಪ್ರಕೃತಿ ಕರ್ಮ ಶ್ರುತಿ ಅವ್ಯಾಕೃತ ।
ಜಾಲ ಚೇತನ ರಾಶಿ ಸ್ವಜ್ಞಾಸ್ವಜ್ಞದಲಿ ।
ಮೂಲ ಶ್ರುತಿ ಭಾಗವತ ರಾಮಾಯಣ ।
ವಾಲಯ ಪಂಚರಾತ್ರ ಬ್ರಹ್ಮತರ್ಕ ಯೋಗಶಾಸ್ತ್ರ ।
ವೇಲೆ ಭಾರತ ಭಾಗವತ ಪುರಾಣಗಳು ।
ಮೇಲು ಶಾಖ ಕರ್ಮ ಭೇದಾಷ್ಟಕ ಅಧ್ಯಯನ ।
ಕೇಳಿ ಸಮಸ್ತ ಸಚ್ಛಾಸ್ತ್ರ ನಿರ್ಣಾಯಕ ಸ ।
ಮ್ಮೇಳ ಬ್ರಹ್ಮ ವಿಚಾರ ಮಾಂಸ ಮಿಗಿಲಾದ ।
ಕಾಲಕಾಲಕೆ ನುಡಿವ ಪ್ರಣವ ಮಂತ್ರ ಗಳೊಡನೆ ।
ಶೀಲ ಗುಣ ರತ್ನ ಮಹಲಕುಮಿದೇವಿ ।
ಆಲಸ ವಿಲ್ಲದಲೆ ವೊಂದೊಂದರೊಳಗಾನಂತಾ ।
ಮಾಲಾಕಾರ ರಾದಲ್ಲಿ ವೇದೋಕ್ತದಲ್ಲಿ ವೇದಾನುಕ್ತದಲ್ಲಿ ವಿ ।
ಶಾಲ ಜ್ಞಾನದಿಂದ ಸದಾ ಅತಿರೋಹಿತದಿ ।
ಆಲೋಚನೆಯಿಂದ ಗುಣ ರೂಪ ಕ್ರಿಯ ।
ಜಾಲ ಸಮೂಹದಲ್ಲಿ ಧ್ಯಾನ ಮಾಡುವಳು ಕರು ।
ಣಾಳುಗಳ ವೊಡತಿ ಕಾಳಿ ಭಕುತಿ ರಸವ ಸರ್ವ ಪ್ರಕಾರದಲ್ಲಿ ।
ಊಳಿಗ ಕೈಕೊಂಡು ನಾನಾ ರೂಪವ ಧರಿಸಿ ।

ಸಾಲವಿಡುವದು ಯೆಣಿಸಿ ಅಂತ ಗುಣದೀರವಾ |
ತೇಲುತ್ತ ತೇಲುತ್ತಲಿ ಮಹಾನಂದವಾದ |
ಕೀಲಾಲ ನಿಧಿಯೊಳಗೆ ಬೆರಗಾಗಿ ನಿಂದಿಹಳು |
ಪಾಲಸಾಗರ ಶಾಯಿ ವಿಜಯ ವಿಠ್ಠಲ ರೇಯನ |
ಕಾಲಗರ ಕಾಂತಿ ಯೆಣಿಸಿ ಗುಣಿಸುತಲಿ | ॥ ೨ ॥

## ತ್ರಿವಿಡಿ ತಾಳ

ಅನಂತ ಗುಣ ಪೂರ್ಣ ವ್ರತ್ಕೃಷ್ಟ ಅಖಿಲೇಶಾ |
ಅನಂತ ಶಕ್ತ್ಯಾತ್ಮ ಸಮಸ್ತ ಪ್ರೇರಕ |
ಜ್ಞಾನಮಯ ಶರೀರ ಸತ್ಸುಖ ವಾರಿಧಿ |
ನಾನಾ ರೂಪಾತ್ಮಕ ನಿಭೇದ ಕಲ್ಯಾಣ |
ಅನಂತ ಶಿರಸಾ ಪಾದಾದಿ ರೋಮ ಪೂರ್ಣ |
ನಾನಾ ಮಹಿಮೆ ಸ್ವಯಂ ಪ್ರಕಾಶ ಪ್ರತಿರಹಿತಾ |
ಹಾನಿ ವೃದ್ಧಿ ವರ್ಜಿತ ಸರ್ವೋಪಾಸ್ಯನೆಂದು |
ಶ್ರೀನಾರಿ ಭಜಿಸುವಳು ಸರ್ವದಾ ಮನದಲ್ಲಿ |
ಧ್ಯಾನ ಮಾಡುವಳು ನವವಿಧ ಭಕುತಿ ಯಿಂದಲಿ
ಅನಂತಾನಂತ ಕಾಲದಲ್ಲಿಬಿಡದೆ |
ಏನಂಬೆ ಯಿದರಂತೆ ವುಪಕ್ರಮೋಪ ಸಂಹಾರ |
ತಾನೆನೆದು ಶ್ರೀಹರಿಯ ಮೆಚ್ಚು ಮಾಡಿ |
ಅನಾದಿಕಾಲದಿಂದಲಿ ಸುಖಪೂರ್ಣಳು |
ನಾನಾ ರೂಪದಿಂದ ಪ್ರಕೃತಿ ಭಿನ್ನ |
ಗೌಣನೆಸರಿ ಸರ್ವ ಜೀವರು ಲಕುಮಿಗೆ |
ಎಣಿಕೆ ಗೈವದು ಬ್ರಹ್ಮವಿಡಿದೂ |
ಮಾಣದೆ ಚತುರಾಸ್ಯ ಗುಣ ರೂಪ ಕ್ರಿಯಾದಲ್ಲಿ |
ಧ್ಯಾನಮಾಡುವ ಜ್ಞಾನ ಪೂರ್ಣನಾಗಿ |
ಆ ನಿಟಲ ನೇತ್ರಾದಿ ಸುರರು ತಮ ಯೋಗ್ಯೋಪಾ |
ಸನೆ ಮಾಡುವರಯ್ಯಾ ವೊಂದೊಂದುಪಸಂಹಾರ |

ಪ್ರಾಣ ನಾಯಕ ನಮ್ಮ ವಿಜಯ ವಿಠ್ಠಲ ನಂಘ್ರಿ |
ರೇಣು ಕಾಣದಲೆ ಸರ್ವರು ಅಪೇಕ್ಷಿಸುವರು | ॥ ೩ ॥

ಅಟ್ಟ ತಾಳ

ಪತಿ ಗುರುವೆ ಸರ್ವ ಶ್ರೀದೇವಿ ವುಪಾಸ್ಯ |
ಪಿತ ಗುರುವೆ ನಿಖಿಳ ಪ್ರಾದುರ್ಭಾವನೆಂದು |
ಪಿತಾಮಹನುಪಾಸ್ಯ ಮತ್ತೆ ಕೆಲವುಂಟು |
ಪಿತಾಮಹಾ ಗುರೋರ್ಗುರುತ್ವೇನ ಸದೋಪಾಸ್ಯ |
ಪಿತಾಮಹ ಮೂಲಗುರುವೆ ಸನಾತನ |
ಚ್ಯುತ ವಿರಹಿತ ದೈವ ಗುಣಪೂರ್ಣ ಅಪರಿ |
ಮಿತನೆಂದು ಸರ್ವ ಜನರೋಪಾಸ್ಯ ಭಾ |
ರತಿ ವಿನ್ನ ದೇವತಿ ಸ್ತ್ರೀಯುಪಾಸ್ಯ |
ಸತತ ಶ್ವಶುರನೆಂದು ಭಾವಿಸುತಿಪ್ಪರು |
ಅತಿಶಯ ಜಾರತ್ವ ವುಪಾಸ್ಯ ಅಪ್ಸರ ವು |
ನ್ನತ ಸ್ತ್ರೀಯರು ಪಿಂಗಳಾದ್ಯರಿಗೆ ನಿಜ |
ಪ್ರತಿಯಿಲ್ಲದೋಪಾಸ್ಯ ಭೂತಿತ್ವೇನ ಮಾ |
ರುತ ಮಿಗಿಲಾಗಿದ್ದ ದೇವತಾ ವುಪಾಸ್ಯ ದಿತಿ |
ಸುತರು ಅಭೂತಿತ್ವೇನ ವ್ರನ್ಮತ್ತಾ ಹಿತನ ವುಪಾಸ್ಯ |
ಸುತನೆಂದು ಪರಬೊಮ್ಮನೆಂದು ದೇವಕಿ ಸತ್ಯ |
ವತಿ ಮಿಗಿಲಾದ ನಾರಿ ಜನೋಪಾಸ್ಯ |
ಸ್ಥಿತಿ ಯಿಪ್ಪಪ್ರಕಾರವು ತೃಣಜೀವ ಮೊದಲಾಗಿ |
ಚತುರಾನನ ದೇವ ಪರಿಯಂತ ಪರಮ ಖ್ಯಾತ |
ಆತ್ಮನೆಂದು ವುಪಾಸ್ಯ ಸಿದ್ಧವಯ್ಯಾ |
ಚತುರಾಗಿ ವೊಂದರೊಳನಂತ |
ತತು ತತು ಜ್ಞಾನ ಮಾರ್ಥಿಕರು ಮಾಳ್ಪರು |
ಪತಿತ ಪಾವನ ಸ್ವಾಮಿ ವಿಜಯ ವಿಠ್ಠಲ ಶಾ |
ಶ್ವಿತ ಲೋಕ ಕೊಡುವನು ತಿಳಿಸಿ ಕೊಟ್ಟು ತಾನೆ ॥ ೪ ॥

ಆದಿ ತಾಳ

ಚತುರ್ದಶ ಭುವನಕ್ಕೆ ಬ್ರಹ್ಮ ರುದ್ರಾದಿಗಳು ।
ಪತಿಗಳಾಗಿಪ್ಪರೆಂದು ಪೇಳಿಕೊಂಡರೇನಹುದೊ ।
ಮತಿಯಲ್ಲಿ ಕೇಳು ಮನುಜ ಸರ್ವರು ಪತಿಯೆಂದು ।
ಶ್ರುತಿಯಲ್ಲಿ ಪೇಳಿದರು ಪುಸಿಯಲ್ಲ ಆವಮಾತು ।
ಕ್ಷಿತಿಯೊಳಗೆ ವೊಂದು ವೈಚಿತ್ರಕವಾದ ।
ಕಥ ವುಂಟು ದರದಕೆ ಬಹು ಜನ ಕುಳಿತಿದ್ದರು ।
ರಥಿಕನೆಂಬೊ ಪೆಸರು ಆರಿಗೆ ಬಪ್ಪದಲವೊ ।
ಗತಿ ತಪ್ಪದಂತೆ ಸರ್ವರನು ಪಾಲಿಸುತಿಹ ।
ಅಥವ ವ್ಯಾಲಿದ್ದಂತೆ ಸರ್ವ ಜನಕೆ ಮುಖ್ಯ ।
ಪತಿ ಶಬ್ದ ಬರುವದೆ ಬಲು ಧಾವಂತ ಗೊಂಡರೆ ।
ಕೃತಕಾರ್ಯ ಹರಿಯೊಬ್ಬ ಸರ್ವ ನಿಯಾಮಕ ।
ಹಿತ ಸ್ವತಂತ್ರನೆನ್ನು ಬ್ರಹ್ಮಾದಿ ಮುಕ್ತಗಣ ।
ತುತಿಸಿ ಕೊಂಡಾಡುತ ಸ್ವಯೋಗ್ಯತಾ ಸ್ಥಾನ ।
ಗತಿ ನೀನೆಯೆಂದು ಧ್ಯಾನಂಗತರಾಗಿ ಬಾಳುವರು ।
ಶತ ಸಹಸ್ರ ಅನಂತ ರೂಪ ವಿಜಯ ವಿಠ್ಠಲ ।
ಇತರಾಪೇಕ್ಷೆಯ ಮಾಡಗೊಡನು ನಂಬಿದವನಾ ॥ ೫ ॥

ಜತೆ

ಪರಮಾಣು ಪ್ರದೇಶದಲ್ಲಿ ಮನಸು ನಿಲಿಸಿ ।
ಗುರುಕೃಪೆಯಲಿ ವಿಜಯ ವಿಠ್ಠಲನ್ನ ಧ್ಯಾನಿಸು ॥ ೬ ॥

ಕಠಿಣ ಶಬ್ದಾರ್ಥ

**ಭೂತಿ** – ಷಡ್ಗುಣೈಶ್ವರ್ಯ ಸಂಪನ್ನ, **ಅಭೂತಿ** – ಐಶ್ವರ್ಯ ಹೀನ,
**ಧಾವಂತ** — ಧಾವತಿ,

ಶ್ರೀ ಗುರು ಮಧ್ವೇಶಾರ್ಪಣಮಸ್ತು.



# ಪಂಚವಿಧ ಮುಕ್ತಿಯೋಗ್ಯರ ಸಾಧನ ತಾರ ತಮ್ಯ ಆತ್ಮಾದಿ ಗುಣೋಪಾಸನೆ ಅಧಮನು ಮಧ್ಯಮ ಪ್ರಸಾದಾನಂತರ ಪಂಚವಿಧ ಅಪರೋಕ್ಷ ಉತ್ತಮ ಪ್ರಸಾದ ಕರ್ಮಕ್ಷಯ ಬಿಂಬಾಪರೋಕ್ಷ

## ೧೫ ನೇ ಸುಳಾದಿ

### ರಾಗ ಶಂಕರಾಭರಣ ಧ್ರುವ ತಾಳ

ನರ ಚಕ್ರವರ್ತಿ ಪಿತೃ ಋಷಿ ದೇವತಾ ಜನ ।
ತರತಮ್ಯ ಪಂಚವಿಧ ಮುಕ್ತಿ ಯೋಗ್ಯ ।
ಪರಸ್ಪರ ವುಂಟು ಯಿದಕೆ ಅಂಶ ರಹಿತ ಅಂಶ ।
ಧರಿಸುವಾನಂತಾನಂತ ಗುಣ ಭೇದದೀ ।
ಚರಿಸುವರು ಯುಗ ಮನುದಿನ ಮಹಾಕಲ್ಪ ।
ಶರೀರವ ಧರಿಸಿ ನೀಚೋಚ್ಚ ವೆನದೆ ।
ಮರಳೆ ಮರಳೆ ಸ್ವಸ್ವ ಕರ್ಮಾನುಸಾರ ದಿಂದ ।
ಪರಿ ಭ್ರಮಣರಾಗಿ ಪೂರ್ವಾರ್ಭ್ಯ ವಿಡಿದೂ ।
ನರಕ ಸ್ವರ್ಗ ಭೂಮಿಯು ನಾನಾ ದುಃಖ ಸುಖ ।
ಸರಿ ಮಿಗಿಲಾಗಿ ವುಂಡು ಹಿಂಗಳದೂ ।
ಹಿರಿದಾಗಿ ಮುಂದೆ ಗತಿಗೆ ಅಭಿಮುಖ ವಾಹದಕ್ಕೆ ।
ಬರುವದು ವಿಶಿಷ್ಟ ಕುಲದಲಿ ಜನ್ಮ ।
ತರುವಾಯು ಸ್ವಶಾಖಾ ಸರ್ವಶಾಖಾಧ್ಯಯನ ।
ಮಿರುಗುವ ಸಾಧನ ಯಿಡೆ ಮೊದಲು ।
ಗುರು ವುಪದೇಶ ಮಾರ್ಗ ತತ್ತದ್ವರಣಾಶ್ರಮ ।
ವರ ಕರ್ಮಾಚಾರ ವಿಚಾರ ಕಾರತ್ವ ।

ಹರಿಯಾಧೀನ ಜ್ಞಾನ ಭಗವತ್ ಸಮರ್ಪಣೆ ।
ನಿರುತ ಯಿಾ ಪರಿಯಿಂದ ನೆಸಗಿದರಾಗೆ ವಿ ।
ಸ್ತರ ಕರ್ಮ ಪ್ರಬಲ ದೌರ್ಬಲ್ಯ ವಿವಿಧ ।
ಚರಕ ಕಾರಕನಾಗಿ ಸಂಪಾದಿಸು ಜ್ಞಾನ ।
ಪರಮ ವಿಶ್ವಾಸದಲ್ಲಿ ಮಾಡಬೇಕು ।
ದುರಿತ ಕುಠಾರಿ ನಮ್ಮ ವಿಜಯ ವಿಠ್ಠಲನ ಸ ।
ತ್ಕರುಣವ ಪಡೆಯಲಾಗಿ ಮುಂದೆ ಅಥವ ಪ್ರಸಾದಾ ॥ ೧ ॥

ಮಟ್ಟ ತಾಳ

ಚಿತ್ರ ವಿಚಿತ್ರದಲ್ಲಿ ಕಾಮ್ಯ ಪುಣ್ಯ ಪಾಪ ।
ನಿತ್ಯವಾಗಿ ಮಾಡೆ ತದನುಸಾರ ವಿ ।
ರಕ್ತಿ ಭಕುತಿ ಅಭಿವೃದ್ಧಿ ಭಗವಂತಾ ।
ತತ್ವಾದಿಗಳ ಜಿಜ್ಞಾಸ ಸಾಮಾನ್ಯ ತರ ।
ಮತ್ತೆ ಶ್ರವಣ ಮನನ ನಾನಾ ಪರಿ ಸರ್ವ ।
ಶಾಸ್ತ್ರ ನಿರ್ಣಯ ಜಿತಾಸನ ಅಭ್ಯಾಸ ಕಾ ।
ಲತ್ರಯ ವಿಶೇಷ ಮನನವು ಅಜ್ಞಾನ ।
ಮಿಥ್ಯಾಜ್ಞಾನಗಳು ನಿವಾಸ ಸರ್ವದಲ್ಲಿ ।
ತತ್ವ ನಿಷ್ಠೆಯು ಬಲು ಪ್ರತಿ ದಿನ ವರ್ಧಮಾನ ।
ಸತ್ಯ ವೈರಾಗ್ಯ ಭಾಗ್ಯ ಭಕುತಿ ಜ್ಞಾನ ಯೋಗ ।
ಚಿತ್ತಜ ಪಿತ ನಮ್ಮ ವಿಜಯ ವಿಠ್ಠಲನ್ನ ।
ಚಿತ್ತದಲ್ಲಿಟ್ಟು ಭಜಿಸಿ ಶುದ್ಧರಾಗಿ ॥ ೨ ॥

ತ್ರಿವಿಡ ತಾಳ

ವೇಗದಿಂದ್ಯಮ ನಿಯಮಾಸನ ಪ್ರಾಣಾಯಾಮ ಚ ।
ನ್ನಾಗಿ ಪ್ರತ್ಯಾಹಾರ ಧಾರಣ ಸಮಾಧ್ಯಾಪ್ಯ ।
ಯೋಗ ಪರಿಪಾಕದಿಂದ ಧ್ಯಾನವಗ್ಗೆಡೂ ।
ನಾಗಶಯನ ಕ್ಷೀರಸಾಗರವಾಸಿಯು ।
ಶ್ರೀಗುರು ಪರಮ ಗುರು ಸೂರ್ಯ ಮಂಡಲ ।

ಜಾಗುಮಾಡದೆ ತಮ್ಮ ಯೋಗ್ಯತಾ ಸಾಧನ ।
ಭಾಗಂಗಳು ತಿಳಿವದು ಮಾಡುವ ಬಗೆವುಂಟು ।
ತ್ರೈಗುಣ್ಯ ವರ್ಜಿತ ಶ್ರೀಕೃಷ್ಣನ ರೂಪ ।
ಈಗ ಸಂಪಾದಿಸು ಕಿರೀಟ ಪರಿಮಿತ ।
ಬಾಗಿ ಭಕುತಿಯಿಂದ ಶರಣೆಂದು ನೋಡಿ ಲೀ ।
ಸಾಗಿ ಧ್ಯಾನಿಸುವದಂಗುಟ ಮಸ್ತಕ ತನಕಾ ।
ಆಗನೋಕ್ತಿಯಿಂದ ತೃಣ ಬ್ರಹ್ಮ ಪರಿಯಂತ ।
ಸಾಗುವರೆಲ್ಲರೂ ಆತ್ಮನೆಂಬೊ ಭಜನೆ ।
ಈಗುಪೋಪಾಸನೆ ಸರ್ವ ಸಾಧಾರಣ ।
ಭಾಗ ವುಂಟು ಯಿಲ್ಲಿ ತತ್ವಭೇದ ಗುಣ ।
ತ್ಯಾಗವಿಲ್ಲದೆ ಮಾಳ್ಪ ಯೇಕ ಚತುರಪಂಚ ।
ವಾಗಿ ಸಪ್ತ ದಶ ಚತುರ ವಿಂಶತಿ ಮಾಗಿ ।
ಲಾಗಿ ಯಿರಾತೆಂದಿ ಬಹು ಅಮಿಶ್ರೋಪಾಸಕರು ಯಿಂ ।
ಬಾಗಿ ಯಿರಾಜನ ಚಿಂತೆ ಯೊಳಗಿಪ್ಪರು ।
ಭಾಗವತರಾಗಿ ಗುಣರೂಪ ಕ್ರಿಯಾ ಶುದ್ಧ ।
ವಾಗಿ ಸಾಮಾನ್ಯ ವಿಶೇಷ ವಿಶಿಷ್ಟದಲ್ಲಿ ।
ಆಗುವದೀಪರಿ ಜ್ಞಾನ ಮಧ್ಯಮ ಪಾಕಾ ।
ಬಾಗರ ಪುಟ್ಟುವದು ವಸುಪಾದಿ ಸುರರಿಗೆ ।
ನಾಗುವದೀಮನಸು ಸ್ವಲ್ಪ ದೇಹಾಂತರ ।
ವಾಗುವಪಾವೇಶ ಪ್ರತೀಕದಲ್ಲಿ ।
ಯೋಗಿ ಗಳಿಗೆ ಪ್ರಚುರ ಹೃದಯದಲ್ಲಿ ಯಿನ್ನಿ ।
ತಾಗುವದು ಸ್ವಲ್ಪಪ್ರತೀಕದಲ್ಲಿ ।
ರಾಗದೂರರು ದೇವತಿಗಳು ಮಾಳ್ಪದು ।
ಭಾಗ ಪಂಚವಿಧದು ತತ್ವಾಂತಕೆ ।
ಭಾಗಿಗಳುಕಾಣೊ ವ್ಯಾಪ್ತದರ್ಶಿಗಳು ಮುಂ ।
ಧಾಗಿ ವ್ಯೊಂದೊಂದು ರೂಪವಧರಿಸಿ ।

ಆಗಾರಮೋಧಿ ಮಿಕ್ತ್ಯಾದಾತ್ರನು ವರ್ಣ |
ಲೋಗಂಡೊಳಗಿದ್ದು ಕ್ರಮಾನುಕ್ರಮದೀ |
ತೂಗುವಬಗೆಯಂತೆ ಹೃದಯ ಗಗನ ಪ್ರತೀಕ |
ಮಾಗುವದಿವರಿಗೆ ಕದಾಚಿತು ಮನಸು |
ಹೀಗೆ ನುಡಿದವರೊಳು ಶತ ಶತ ಶತ ಪೃಥಕು |
ಯೋಗಿರಾಯರು ಗಂಧರ್ವಗಳೆನ್ನು ಧ್ಯಾನದಲ್ಲಿ |
ರೋಗನಿವಾರಣ ವಿಜಯ ವಿಠ್ಠಲ ಕೃಪಾ |
ಸಾಗರನೊಲಿಯೆ ಮುಂದೆ ಮದ್ವ್ಯಮ ಪ್ರಸಾದಾ | ॥ ೩ ॥

ಅಟ್ಟ ತಾಳ

ತನ್ನಯ ಯೋಗ್ಯತೆ ಉಪಾಸನೆ ಅಭ್ಯಾಸ |
ಮುನ್ನೆ ಭಗವತ್ಪಾದ ಲಗ್ನ ಮನ |
ಭಿನ್ನವಿಲ್ಲದೆ ನಿಶ್ಚಲವಾದ ಸಂಭ್ರಮ |
ಇನ್ನು ಸಂಪ್ರಜ್ಞಾ ಸಂಪ್ರಜ್ಞ ಧ್ಯಾನವಲ್ಲದೆ |
ಮುನ್ನೆ ವಾಸನಮಯ ಭಗವತ್ಪ್ರತಿಮೆ ಪರು |
ತನ್ನವಾಗಲು ಯಿದೆ ಪ್ರಮಾನಸಾಪರೋಕ್ಷ |
ಪನ್ನೆಪೇಳಿದ್ದು ಅಪರೋಕ್ಷ ಸಾಧನ i
ಘನ್ನವಾಗಿದೆ ಅಪರೋಕ್ಷಕಾಲ ಧ್ಯಾನ |
ಇನ್ನಿತು ಬಗೆಯಿಂದ ಪುನರಾವರ್ತಮಾನ |
ಸನ್ಮಾನ ಸ್ವಸ್ವಾನುಕೂಲ್ಯಾನುಸಾರ ಶ್ರೀ |
ಚನ್ನರಾಮಕೃಷ್ಣ ಹಯುಗ್ರೀವ ನರಹರಿ |
ಮನ್ನೆ ಕಪಿಲವ್ಯಾಸ ದತ್ತಾದಿ ಮೂರ್ತಿಯ |
ಬಣ್ಣಿಸಿ ಸವಿಶೇಷನಿರ್ಭೇದ ಗುಣಪೂರ್ಣ |
ವನ್ನು ತಿಳಿದು ಆತರುವಾಯ ಪಚ್ಛ್ಯತ್ರ |
ವನ್ನೆಸದ್ಗುರು ಮುಖದಿಂದ ಪ್ರಸಾದತಾ |
ಅನ್ನುದಿನ್ನದಲ್ಲಿ ಶ್ರವಣ ಮನನ ಧ್ಯಾನ |
ಬನ್ನಬಡದೆಮಾಡಿ ಮನಸಾಪರೋಕ್ಷ ಪಾ |

ವನ್ನ ಯೆರಡುಬಗೆ ಪ್ರಸಿದ್ಧ ಧ್ಯಾನೋಪಾ ।
ಸನ್ನವೊಂದು ಶಾಸ್ತ್ರೋಪಾಸನ ವೊಂದು ।
ಬಿನ್ನಣ ಬಹುತರ ಅಭ್ಯಾಸ ಬಲದಿಂದ ।
ಆಸ್ನೋದಕ ನಿದ್ರೆ ಪರಿಮಿತ ವಿಚಾರ ।
ರನ್ನದ ಕನ್ನಡಿ ಯಂದದಿ ಮನಸು ಪ್ರಸನ್ನವದನ ಸಂತುಷ್ಟ ಲಕ್ಷಣ ಸಂ।
ಪನ್ನ ಪರಾವರ ತತ್ವ ವಿಚಾರಣೆ ।
ಮನ್ನಣೆ ಇಷ್ಟಾನಿಷ್ಟ ಕಾಮ್ಯ ಕಾಲ ।
ಪುಣ್ಯಪಾಪ ಕ್ಷಯ ಅಭಿವೃದ್ಧಿ ಅನುಭವ ।
ಗಣ್ಯವಿಲ್ಲದೆ ಸ್ವಸ್ವಾಚಾರ್ಯರ ಉಪದೇಶ ।
ಉನ್ನತೋನ್ನತ ಪ್ರಾಕೃ ವಿಜ್ಞಾನ ವಿಶೇಷ ।
ವನ್ನೆ ವೃತ್ತಿ ರೂಪ ಸ್ಥೂಲ ಸೂಕ್ಷ್ಮ ಧ್ಯಾನ ।
ತನ್ನ ದೇಹಾಕಾರ ಪ್ರಾದೇಶಾಂಗುಟ ಮೂಲ ।
ಅನ್ನಂತಾತ್ಮಕ ರಾಮ ಸ್ವಷ್ಟತ್ವ ಪ್ರಭೇದ ।
ಕಣ್ಣು ಹುಬ್ಬುಗಳಿಂದ ಬನಂದೋದ್ರೇಕವೊ ।
ಬಣ್ಣಿಸು ಸ್ತೋತ್ರವ ಮದ್ಧ್ಯಮಾಧಮ ದ್ರೋಹ ।
ಇಸ್ನಿತಾದರೆ ನನಾ ಪ್ರಕಾರ ಪ್ರತಿಕೂಲ ।
ಸನ್ಯಾಯ ಅನ್ಯಾಯ ಸಬೀಜ ನಿರ್ಬೀಜ ವಕ್ಕು ।
ಪುಣ್ಯವೆ ಯಿಾಪರಿ ಅನುಕೂಲ ಸರ್ವದಾ ।
ಪುನ್ನಾಡಿಯೊಳಗೆ ಸಂಕಲ್ಪ ವಿಕಲ್ಪ ಹಿ ।
ರಣ್ಯಗರ್ಭನು ಸತತ ಪರಿಶುದ್ಧನು ।
ಕಣ್ಣು ಮೂರುಳ್ಳವ ಮುಕ್ತಾದ ಜೀವಿಗೆ ।
ಹೆಣ್ಣು ಮಣ್ಣು ಹೊನ್ನಿನಿಂದಲಿ ಮಹಾಕೇಶೊ ।
ಅನ್ನಿತರೊಳು ಜಂಗಮನಾಗಿ ಯಿದ್ದವ ।
ಧನ್ಯನೊ ಧನ್ಯನೊ ಮಹಾಧನ್ಯನು ಕಾಣೋ ।
ಸಣ್ಣವನಾದರು ಪರಿಪಕ್ವ ಜ್ಞಾನಿಯೊ ।
ಹಣ್ಣಿಗೆ ಮೆಚ್ಚಿದ ವಿಜಯ ವಿಠ್ಠಲ ಮೋ ।

ಹನ್ನ ಮೋಹನ ರೂಪ ಮುಕ್ತರ ಬಿಂಬಾ ॥ ೪ ॥

ಆದಿ ತಾಳ

ಬೊಮ್ಮಾದಿಗಳ ವಿಡಿದು ಸರ್ವತತ್ವೇಶರಲ್ಲಿ ।
ರಮ್ಮೇಶ ಪರಮಾತ್ಮನ್ನ ಪೊಳವಸುಂದರ ರೂಪ ।
ಸಮ್ಯಜ್ಞಾನದಲ್ಲಿ ನೋಳ್ಪಾಪೇಕ್ಷ ದರುಶನ ।
ಒಮ್ಮೆಂದೊಮ್ಮೆ ಅಲ್ಲ ಪಂಥಾನುಸಾರ ದಿಂದ ।
ನಮ್ಮಿಸುವರು ಸಾಕ್ಷಾನ್ಮೋಕ್ಷ ಹರಿಪಾದ ಪಾಗದು ।
ನೆನುಮ್ಮವರಲ್ಲ ಮತ್ತೆಂದಾಪೇಕ್ಷ ರಹಿತರು ।
ಸಮ್ಮತಿ ಯೊಂದಲಿ ಮಹದಾದಿ ಲೋಕವಾಸ ।
ಸಮ್ಮತ ಗುರು ಪ್ರಪದೇಶ ಹರಿ ದರ್ಶನ ವಿಶೇಷ ।
ಬೊಮ್ಮಾದಿ ಸ್ಥಾನದಲ್ಲಿ ತೀವ್ರಧ್ಯಾನ ಪರಿಪಾಕ ।
ದುಮ್ಮಾನ ಪರಿಹಾರ ಅಧಿಕಾರ ತನಭೇದ ।
ಅಮ್ಮೃಸು ಪಾದ ಮಾಶ್ರಾ ಮಾಶ್ರಾ ಯೇಕಕಾಲ ।
ಷಣ್ಮಾತ್ರ ಮುಹೂರ್ತ ಪಾದ ಯೋಗಿ ಯೋಗಿ ।
ಅಮ್ಮಹಾ ತಪಸ್ವಿಯು ಜ್ಞಾನಿ ಮಹಾಜ್ಞಾನಿ ।
ಸಮ್ಮೋದದಿಂದಲಿ ಪಂಚವಿಧವೋ ।
ಗಮ್ಯಗೇಯನೊ ಹರಿ ತತ್ತತ್ಸ್ವಾಂಶಕೆ ಅನು ।
ಪಮ್ಮನ ಧ್ಯಾನ ತಿರೋಹಿತ ಅತಿರೋಹಿತ ।
ತಮ್ಮ ತಮ್ಮ ತಕ್ಕದ್ದಲ್ಲದೆ ವೆಗ್ಗಳವಿಲ್ಲ ।
ಉಮ್ಮೇಶ ಪ್ರತ್ತ್ಯರಿಗೆ ಅಂಶದಿಂದ ।
ಹಮ್ಮು ನಾನಾ ದೋಷ ಬಿಡುವದು ಸಿದ್ಧತರ ।
ತಮ್ಯಾನುಸಾರದಂದ ಬಿಡದಿವಕೋ ।
ಇಮ್ಮಡಿ ಸಾರಿ ಐದು ವಿಧ ಅಪರೋಕ್ಷ ಜ್ಞಾನ ।
ಕಮ್ಯವಾದ ತನುವಾಯು ಶ್ರೀ ನಾರಾಯಣನವು ।
ತ್ರ್ಯಮ್ಮ ಪ್ರಸಾದ ಪ್ರಾಪ್ತವಾಗುವದು ಮುಂದಕ್ಕೆ ।
ಘಮ್ಮನೆ ಆವ ಜನ್ಮದಲಪರೋಕ್ಷವೋ ।

ಜನ್ಮಾರಭ್ಯವಾಗಿ ಸಂಚಿತಾಗಾಮಿ ಜಡ |
ಕರ್ಮ ಪ್ರಧ್ವಂಸ ತತ್ತದಭಿಮಾನಿ ದೈತ್ಯರ |
ಸಮ್ಮೋಹ ತಲ್ಲಣ ಸ್ವಶರೀರದಲಿ ಯಿದ್ದು |
ಅಮ್ಮರಾ ಅಪರೋಕ್ಷವು ಪ್ರವೃತ್ತಿಯಾದ ಆದೇ |
ಜನ್ಮದ ಸಂಚಿತ ಕರ್ಮ ಪ್ರಾಬಲ್ಯವೋ |
ಸುಮ್ಮನೆ ಪೋಷದಲ್ಲಾ ಅಪಕಾರ್ಯಕಾರಿ ಜನಕೆ |
ಉನ್ಮತ್ತನಾಗದೆ ಯಿದು ವಿಚಿತ್ರೋಕ್ತಿ ಯಿಷ್ಟ |
ಕರ್ಮಪುಣ್ಯಂಗಳೆ ಮಾಂನೆ ಸೆಸಗಲು ಆ |
ಕಾಮ್ಯವಾಗುವದು ಜ್ಞಾನದಭಿವೃದ್ಧಿಗೆ ಆ |
ತುಮ್ಮದೊಳಪರೋಕ್ಷ ಮೇಲು ಮೇಲಾಗಿ ಅನ್ಯ |
ಕರ್ಮ ಸಂಚಿತ ವಲ್ಲ ಮುಂದೆ ಫಲಜನಕತ್ವ |
ಸಮ್ಮನವಾಗಿ ಸಬೀಜ ಪುಣ್ಯಾಭಿಮಾನಿಗಳು |
ಅಮ್ಮರ್ತರಾಗಿ ಸುರರು ಪ್ರವೇಶ ಮಾನಸರಿ |
ಣಮ್ಮೃಸವದು ಪುಣ್ಯ ಜ್ಞಾನಾ ಮಾಹಾತ್ಮೆ |
ಸಮ್ಮಂಧ ಚೇತನ ಜ್ಞಾನೋಪಕಾರಾಖ್ಯ |
ಕರ್ಮಂಗಳು ತತ್ತದ್ರೂಪ ಕರ್ತ ಗಾಗೋವು |
ಅಮ್ಮಹಿಯೊಳು ಮಾಘ ಸ್ನಾನಾದಿಯಿಂದ ಜನಿತ |
ಕರ್ಮಂಗಳಿಂದ ಪುಣ್ಯ ಬಂದು ಸೌಖ್ಯವೇ ಯಿತ್ತು |
ಸುಮ್ಮನಸ ಮೊದಲಾದ ಸರ್ವರಿಗೆ ಪುಟ್ಟು ತಾರ |
ತಮ್ಯನುಸಾರದಿಂದ ವೃಣಿಸಿ ನಿರ್ಜವಹುದು |
ಒಮ್ಮೆಟ್ಟದಂತೆ ಜ್ಞಾನೋತ್ತರ ಜಡ ಕರ್ಮವನು |
ಚಮ್ಮತ್ಕೃತಿ ಜ್ಞಾನ ಪಾವಕ ದಗ್ಧವಾಕ್ಕಾ |
ಒಮ್ಮನದಲಿ ನೋಡು ಪಾಪ ಪುಣ್ಯಗಳೆರಡು |
ಚಿನ್ಮಿಶ್ರವಾದದು ದೇವ ದೈತ್ಯರಿಗೆ |
ಸಮ್ಮಾಗವಾಗೋದು ಯೆಂಧಿಗೆಂದಿಗೆ ಆ |
ಜನ್ಮಾಂತರಾಪಾದಕ ಮಾಡಿದಘ ಸಂಶ್ಲೇಷ |

ಕರ್ಮಾ ಕರ್ಮ ಕರ್ಮದಿಂದ ಫಲ ನಿಷ್ಫಲ ಜ್ಯೋತಿ .
ಷ್ಟೋಮಾದಿ ಫಲಪ್ರಾಪ್ತ ಕೆಲವು ಹ್ರಾಸವಯ್ಯಾ ಅ ।
ಕಾಮ್ಯ ಪುಣ್ಯದಿಂದ ಕೆಲವು ಚಿಜ್ಞಾನ ವೃದ್ಧಿ ।
ಚಿನ್ಮ್ರಶಾಸ್ತ್ರನಂದಕೆ ಅಭಿವೃದ್ಧ್ಯರ್ಥ ಸಿದ್ಧಾ ।
ಜನ್ಮ ಜನ್ಮಾಂತರ ತೀವ್ರ ಪರಿಪಾಕ ಸಾ ।
ಧನ್ಮ ಮಾಡುವಾಗ ವುಳಿದದೆ ಯಿಂದೆ ಅನುಭವ ।
ಷಣ್ಮುಖಗಾದರು ಅಶಕ್ಯವಾಯಿತು ।
ನಿಮ್ಮ ನಿಮ್ಮ ಪಾಡೇನು ಹರಿ ಕೃಪೆಯಿಂದಲಿ ವು ।
ಪಮ್ಮದ ಕಿಂಚಿತು ಭೋಗಾಂತರ ಮಧ್ಯ ।
ಸನ್ಮಣಿ ಜ್ಞಾನಿ ತಾನೆ ಜನ್ಮಾಗಿ ನಿತ್ಯ ಭಗವ ।
ದ್ಧರ್ಮ ಪ್ರವರ್ತಿಸಯಾಗೆ ಆನಂದಾಭಿವೃದ್ಧಿಗೆ ।
ಸಮ್ಯ ಸತ್ಕರ್ಮ ಪಡಿದು ನಿಷಿದ್ಧ ತ್ಯಾಗ ಮಾಡಿ ।
ಮಮ್ಮತ ರಹಿತರಾಗಿ ಅಪರೋಕ್ಷ ಸಂಪಾದಿಪ ।
ನಿಮ್ನ ಮಾಡದೆ ಸರ್ವರ ಜ್ಞಾನಿಗಳಿಗೆಲ್ಲ ।
ಊಮ್ರಳಿಕೆಯಿಂದ ಕ್ಲಿಪ್ತ ಪ್ರಾಪ್ತವ್ಯ ಹಾನಿ ।
ಅನ್ನಿಮಿಷ ಮೊದಲಾದ ಮನುಜಾದಿ ಪರಿಯಂತ ।
ರಮ್ಮಯನಸನ್ನ ಯಿಚ್ಛಾವರ್ಕ ವಿವಿಧ ।
ಪೇಮ್ರ್ಯಯಿಂದಲಿ ಪೂರ್ವರಿಗೆ ವುಂಟು ಪೋರ್ವರಿಗಿಲ್ಲ ।
ಈ ಮುಕ್ತರಿಗೆ ಕ್ಲಪ್ತಾನಂದಕೆ ಯೋಚಿಸು ।
ತಮ್ಮ ಸ್ವಾಧಿಕಾರ ವೆಂಬೋದೆ ಕ್ಲಪ್ತಾನಂದ ।
ಸೌಮ್ಯವಾಗಿದ್ದ ಅಧಿಕತ್ವವೆ ಪ್ರಾಪ್ತವ್ಯ ।
ಅಮೃತಾಶನ ಗಣಕೆ ಅನಾದಿ ಸ್ವರೂಪ ।
ಬೊಮ್ಮನಿಚ್ಛಾನೀತನು ಅವಿಧಿ ನೀತ ಸುರರು ।
ಅಮ್ಮನುಜೋತ್ತಮರು ವಿಧಿನೀತರು ಮುಖ್ಯ
ಮುಮ್ಮರಿಯಾದೆ ಅಕ್ಕು ನಿತ್ಯ ನೈಮಿತ್ಯಕ ।
ಕಾಮ್ಯ ಕರ್ಮದಿಂದ ಪಾಪ ಸುಕೃತ ವೈ ।

ಷಮ್ಯ ಫಲವಾಗಿ ದುಃಖ ಸುಖ ವುಂಡುಂಡು |
ತನ್ಮಯನಾಗಿ ಸರ್ವ ಯೋನಿಯಲ್ಲಿ ಸಂಚರಿಸಿ |
ಕರ್ಮಾತರರಾಗಿ ಅಲ್ಲಿಗಲ್ಲಿಗೆ ಬರುತ ಬಂದು |
ಕ್ರಮೇಣ ವರ್ಧನಾಗಿ ಹೇಯ ಬುದ್ಧಿಯು ತೊರೆದು |
ಹೆಮ್ಮೆಯಿಂದಲಿ ಗುರೂಪದೇಶ ಬಲದಿಂದ |
ಕರ್ಮಕಾಮನಾಗಿ ಹರಿಯ ಪೂಜಿಸಿ ಕೊಳುತಾ |
ದುರ್ಮತ ಪೊಂದದೆ ಜ್ಞಾನ ಭಕ್ತಿ ವೈರಾಗ್ಯ |
ಸಮ್ಮಿಳಿತವಾಗಿ ಸುಜನರೊಡನೆ ಶ್ರವ |
ಣ ಮ್ಮನನ ನಿದಿಧ್ಯಾಸನ ಧ್ಯಾನೋಪಾಸನೆ ಮಾರ್ಗ |
ಬೊಮ್ಮ ಬೀಜಮಂತ್ರ ಶ್ವಾಸನಿರೋಧ ಜಪ |
ಕ್ರಮ್ಮ ಯೋಗಾಭ್ಯಾಸ ನಾಡಿ ಪ್ರಭೇದ ಬೋಧ |
ಬೊಮ್ಮಾಂಡ ಪಿಂಡಾಂಡ ರೂಪ ಯೇಕೈಕ ಧ್ಯಾನಾ |
ತುಮ್ಮ ಗುಣದಿಂದ ಸಂತುಷ್ಟನಾಗಿ ಪಾಪ |
ನ ಮ್ಮಯಾಪೇಕ್ಷ ಅಪರೋಕ್ಷ ಯೀಕ್ಷಣ |
ಅಮ್ಮಿತ ಮಹಿಮನ್ನ ಬಿಂಬ ಬಿಂಬ ಮೂರ್ತಿಗಳ |
ಸಮ್ಮ ತಿಳಿಸಿ ತಿರೋಹಿತ ಅತಿರೋಹಿತ |
ಒಮ್ಮೊಮ್ಮೆ ಯಾಗುತಿರೆ ಕಡಿಗೆ ಸಾಧನ ಸಾಧ್ಯ |
ಉನ್ಮಾದಾನಂದಾದಿ ಕುಣಿ ಕುಣಿದಾಡಿ ಪರಮಾ |
ತುಮನ್ನ ಧ್ಯಾನಿಪರು ಪ್ರತೀಕಾ ಪ್ರತೀಕಾಲಂಬರು |
ಅಮ್ಮಯು ಅನುಸರಿಸಿ ಆದ್ಯಂತಕಾಲ ಬಿಡದೆ |
ಅನ್ನಯ ಕೋಶದಿಂದ ಸಿದ್ಧಗಾತ್ರವ ತೆತ್ತು |
ಅಣ್ಮಹತ್ತು ರೂಪಗಳ ಯೇಕೀಭಾವ ನೆನೆದು |
ಕಣ್ಮನ ದಣಿವಂತೆ ಯುಕ್ತಿಪರು ಯೋಗ್ಯದಲ್ಲಿ |
ಹಣ್ಮದ್ದ ಮೂರ್ತಿಯ ಆರಂಭಿಸಿ ಆನು |
ಪಮ್ಮ ಪ್ರಾಜ್ಞನ ತನಕ ಆಲೋಚನೆಬೇಕು |
ಈಷಣ್ಮಾತ್ರ ಬಿಡದಿರಿ ಯಿಂತು ನೋಡಲು ಸುರ |

ನಿಮ್ನಗಾದಿ ತೀರ್ಥ ರಂಗಾದಿ ಕ್ಷೇತ್ರದಲ್ಲಿ ।
ಸನ್ಮಾನ ಶಾಂತ ದಾಂತ ವುಪರತಿ ತಿತಿಕ್ಷಬಲು ।
ಸಮ್ಮಹಿತಾದಿ ಲಕ್ಷಣ ಭಾವ ಪ್ರಕೃತಿ ಕಾರ್ಯ ।
ಸಮ್ಮೇಳರಾಗಿ ನಾವು ತಂತ್ರ ವೇದೋಕ್ತ ಕರ್ಮ ।
ಒಮ್ಮಡಿಮ್ಮಡಿ ಪುಣ್ಯ ಫಲ ಕತಿಶಯ ಮಿಗಿಲು ।
ಧರ್ಮಧ್ವಜವ ಬಿಟ್ಟು ಚಿತ್ತೇಕಾಗ್ರದಲಿ ಅ ।
ಲಮ್ಮನ ವಾಗದಲೆ ಮರಳೆ ಮರಳೆ ಕಾಣು ।
ಸನ್ಮಹಾಮಿಂಚು ಸೂರ್ಯಕಾಂತಿ ಯಂತೆ ವುಪಾಸ್ಯ ।
ಹೊನ್ನಣ್ಣು ಹೆಣ್ಣಿನಾಶೆ ಬಿಡಿಸಿ ಸಂಗಪಲು ಸು ।
ಹೃನ್ಮಿತ್ರನಾಗಿ ಯಿದ್ದು ಭಕ್ತರ ಕಡೆಗೆ ಯೇ ।
ನಮ್ಮೋಚಯಾಮಿ ಯೆಂಬೋ ನ್ಯಾಯ ವೃತ್ತಿಯಿಂದ ।
ಸನ್ಮಾಗ ನಾಗುವ ತನ್ನ ತೋರಿ ಕೊಳುತಾ ।
ಧೂಮ್ರ ನಿವರ್ತವಾದ ದೀಪ ಪಾವಕ ನಂತೆ ।
ಅಮ್ಲಹಚ್ಚಿ ಬೆಳಗಿದ ತಾಮ್ರ ಭಾಜನ ದಂತೆ ।
ಅಂತರ ದೇಹದಲ್ಲಿ ।
ಸುಮ್ಮನೋ ಜಿಜ್ಞಾಸ ಅಪರೋಕ್ಷ ಪ್ರಸಾದ ।
ತಂಮುಕ್ತಿಯಿಂದಲಿ ಆನಂದ ವೀರ್ಯವಾ ।
ಕಮ್ಮಗೋಲನಯ್ಯ ವಿಜಯ ವಿಠಲನ ವು ।
ತ್ತಮ ಪ್ರಸಾದದ ಮಹಿಮೆ ಅಪಾರ ಕಾಣೋ ॥ ೫ ॥

ಜತೆ.

ಜ್ಞಾನಪೂರ್ವೋತ್ತರದಿಂದ ಪ್ರಾಜ್ಞನ ಕಂಡು ।
ಪ್ರಾಣೇಶ ವಿಜಯ ವಿಠಲನ್ನ ಚಿನ್ಮಿತ್ರನ ಕಾಣೋ

## ೧೫ ನೆಯ ಸುಳಾದಿಯ ಕಠಿಣ ಶಬ್ದಾರ್ಥ

ಕಿಶೋರ-ಬಾಲರೂಪ ಕಿಶೋರ ನಾಮಕ ಕಪಿ, ನೇಗುವರು-ಗುಣಿಸುವರು, ಭಾಗಪಂಚಕ-ಪೃಥ್ವಿ ಅಪ್ ತೇಜ ವಾಯು ಆಕಾಶ ವೆಂಬ

ಪಂಚತತ್ವ, ಆಗಾರ ಮೇಧಿ – ಗೃಹಸ್ಥಾಶ್ರಮಿ, ಲೋಗರ – ಜನರ, ಆಪನ್ನೆ-ತಿಳಿದಷ್ಟು, ಬಿನ್ನಾಣ–ಚನ್ನಾಗಿ, ಲೇಸಾಗಿ; ಹಣ್ಣಿಗೆನೆಚ್ಚಿದ-ಶಬರಿ ಯೆಂಜಲ ಪಣ್ಣಿಗೆ ಮೆಚ್ಚಿದ ಶ್ರೀರಾಮ, ನೆಮ್ಮಿವಲ್ಲ-ಹೊಂದು ವವರಲ್ಲ, ಅಮ್ಮೈಸು – ತಿಳಿದುಕೊಳ್ಳು, ಗಮ್ಯಗೇಯ – ಹೊಂದಲು ಯೋಗ್ಯ, ಗಾನಯೋಗ್ಯ; ತಲ್ಲಣ-ಚಿಂತೆ; ನಿಮ್ನ–ಇಳುಕಲ, ನೆಲೆಗಾಣದ್ದು, ಉಮ್ಮಳಿಕೆ-ಹಳಹಳಿ; ನಿಮ್ನಗ-ನದಿ; ಕಮ, ಗೋಲಾ-ಮನ್ಮಥ.

## ತ್ರಿವಿಧ ಜೀವಸ್ವರೂಪ ಲಿಂಗ ದೇಹಾಪಕರ್ಷ ತತ್ಕಾರ್ಯ ಅಂಶ ಅವತಾರ ಆವೇಶ ಉತ್ಕ್ರಾಂತಿ ಆನಂದ ಉನ್ನಾಹ ಯೋಗ್ಯೋಪಾಸನಾ ವಿವರ ಪ್ರಮೇಯಮಾಲಾ ೧೬ ನೇ ಸುಳಾದಿ

ಧ್ರುವ ತಾಳ

ಶುದ್ಧ ಸ್ವಭಾವ ಜೀವ ಜ್ಞಾನಾನಂದ ಶರೀರ ।
ನಿರ್ದೋಷ ನಿರ್ವಿಕಾರ ಅನಾದಿ ಲಿಂಗ ।
ಬದ್ಧನಾಗಿಪ್ಪ ಸಂಸೃತಿಯಲ್ಲಿ ನೆಲೆಯಾಗಿ ।
ಬಿದ್ದು ಸಂಚರಿಸುವ ನಾನಾ ಯೋನಿ ।
ಬುದ್ಧಿಯು ತೋರದೆ ವಿಷಯ ಭುಕ್ತಿಯಲ್ಲಿ ।
ಸನ್ನಿದ್ಧನಾಗಿಪ್ಪ ಪುನರಾವರ್ತಿ ಯೆಡೆಗೆ ।
ಇದ್ದಷ್ಟೆ ಅನುಭವಿಪ ಯಿದರಿದರ ಕಾರಣ ।
ಪೊದ್ದಿಕೊಂಡಿಪ್ಪವು ತ್ರಿಬಣ್ಣದಲ್ಲಿ ।
ಪದ್ಧತಿ ವೊಂಟು ಕೇಳಿ ಮೇಲೆ ವೇಲೆ ಸ ।
ಮುದ್ರದ ಥೆರೆಯಂತೆ ಕರ್ಮಂಗಳು ।

ಭದ್ರಾಭದ್ರ ಗತಿಗೆ ಸಾಧನ ಮಾಹದಿದಕೊ ।
ಸಿದ್ಧವಾದ ಪ್ರಮೇಯ ತಿಳಿಯ ಬೇಕು ।
ಮಧ್ವ ಮತವ ಪೊಂದಿ ನಡೆದ ಮಾನವ ಪ್ರ ।
ಸಿದ್ಧ ವಂತನು ಕಾಣೊ ಗುಣವಂತನು ।
ಗೆದ್ದು ಪೋಗುವ ಭವ ಶಾಸ್ತ್ರ ವ ದಾಟಿ ಭ್ರಾಂತಿ ।
ಒದ್ದು ತೀವ್ರದಿಂದ ಹರಿಪುರಕ್ಕೆ ।
ಸುಪ್ತಿಯು ಕೇಳಿ ಜನರು ಯೋಗದಿಂದಲಿ ನಿತ್ಯ ।
ಇದ್ದು ಮುಕ್ತರೊಳಗೆ ಮೂರು ಬಗೆ ವುಂಟು ।
ಪದ್ಮಜ ವಿಡಿದು ಪುಷ್ಕರ ಪರಿಯಂತ ಮಹಾ ।
ವಿದ್ಯಾವಂತರು ಅಪ್ರತೀಕಾಲಂಬರು ।
ಸದ್ಮನಿಗಳು ಯೆಂಭತ್ತು ರಾಯರು ನೂರು ।
ಪ್ರಸಿದ್ಧರಗಂಧರ್ವ ಅಪ್ಸರರು ಯಿಪ್ಪೇ ।
ಅರ್ಧ ಯಿಂದ್ರರು ಹನ್ನೊಂದು ಮಂದಿ ಮನುಗಳು ।
ನಿರ್ಧಾರವಾಗಿ ಯಕ್ಷ ದೈತ್ಯ ವಿದ್ಯಾಧರ ।
ಸಿದ್ಧ ಸಾಧ್ಯರು ವಿಜಯ ಜಯಾದಿ ದ್ವಾರಪಾಲರು ।
ಖದ್ಯೋತ ಸಾರಥಿ ದಿನ ತಾರಾ ಯೋಗ ಕರಣಾ ।
ಅಬ್ದ ದ್ವಯಪಕ್ಷ ದಕ್ಷಿಣೋತ್ತರಾಯಣ ।
ಅದ್ರಿ ಅವಾಂತರ ಗಗನ ದ್ವೀಪ ಪ್ರತಾಪ ।
ಅಧ್ವರ ಮೊದಲಾದ ದ್ರವ್ಯಂಗಳಾಭಿಮಾನಿ ।
ಕದ್ರುವೆ ಮಕ್ಕಳು ಧೇನು ಸ್ವಾನಾದಿ ಸರ್ವ ।
ಕ್ಷುದ್ರನಾಗಿಪ್ಪ ಪದಾರ್ಥಾಭಿಮಾನಿಗಳು ।
ಈ ಧರೆ ಯೆಣಿಸೆ ಅಲ್ಪಾಧಿಕಾರಿ ಗಣವು ।
ಸಿದ್ಧರಂಧ್ರರಿವರೊಳು ಪ್ರತೀಕಾ ಅಪ್ರತೀಕಾ ಲಂಬನರು
ಸಿದ್ಧನಾಗಿಪ್ಪರು ವಿವರ ತಿಳಿಯ ಬೇಕು ।
ಒದ್ಧವಾಗಿ ಪೇಳುವೆ ಮನುಜ ಗಂಧರ್ವ ಹರಿ . ಮನುಜ
ಗದ್ದುಗೆ ವುಳ್ಳ ಜನರು ಮುನಿ ಪಿತೃ ಮನುಜೋತ್ತಮರು । ಭೂಮಿ

ಇದ್ದ ಜಂಗಮ ಸ್ಥಾವರ ತೃಣಾದಿಗಳು ಅ।
ನಾದ್ಯ ಕಾಲದಿಂದಲಾನಧಿಕಾರಿಗಳು।
ಅದ್ವಿತೀಯ ಪತಿ ನಮ್ಮ ವಿಜಯ ವಿಠ್ಠಲ ನಂಘ್ರಿ।
ಪದ್ಮವ ಭಜಿಸುವರು ಭಾವದಲ್ಲಿ ತಿಳಿ ॥ ೧ ॥

ಮಟ್ಟ ತಾಳ

ಷೋಡಶ ಕಲೆ ವುಳ್ಳ ಲಿಂಗ ದೇಹವು ನಿತ್ಯಾ।
ಗೂಡಿನಂತಿಪ್ಪದು ಜೀವಿಗಳಿಗೆ ಬಿಡದು।
ನೋಡಿದರದರಲ್ಲಿ ಕಾರಣ ರೂಪಗಳು।
ಜೋಡಿಸಿದಂತೆ ಪೊಂದಿಪ್ಪವು ಕಾರ್ಯಗಳು।
ಮಾಡವು ಅಲ್ಲಿಂದ ತೆರಳಿ ಬಾರದ ತನಕಾ।
ಕೂಡಿಕೊಂಡು ತಮ್ಮ ಸ್ವಭಾವಗಳು ವೆರಸಿ।
ನಾಡಿ ಯೊಳಗಿದೆ ತಾರತಮ್ಯದಿಂದಾ।
ರೂಢಿಸಿ ಮರೆಯದೆ ಮಾತಾಡು ಭಕುತಿಯಿಂದ।
ಪಾಡಿದವರ ಪ್ರಾಣ ವಿಜಯ ವಿಠ್ಠಲ ರೇಯ।
ಬೇಡಿದ ವರಗಳ ಕೊಡುವ ಯಿಾ ಪರಿ ಕೊಂಡಾಡೆ ॥ ೨ ॥

ತ್ರಿವಿಡಿ ತಾಳ

ಮನದಲ್ಲಿ ಅಸೂಯಾ ಯಿಾಪಾರ್ಶ ಚಂಚಲ ಯೋ।
ಚನೆ ಸತ್ವದಲಿ ವುಂಟು ರಜೋ ಭಾಗದಲಿ।
ವಿನಗುವ ಕರ್ಣದಲ್ಲಿ ಬಧಿರತ್ವ ವುಂಟು ಕ।
ಣ್ಣಿನಲಿ ಕಾಚು ಮಲ ಮೊದಲಾದವು।
ತನುವಿಗೆ ಬರುವ ಕುಷ್ಟ ರೋಗ ತ್ವಕ್ಕಿನಲ್ಲಿ।
ಅನುದಿನ ರಸನದಲ್ಲಿ ಪ್ರೋಷಾದಿಯಾ।
ಪಿನಸ ಯೆಂಬುವದು ನಾಸಿಕ ದಲ್ಲಿ ವುಂಟು।
ಇನಿತೇ ತಿಳಿವದು ಐದು ಜ್ಞಾನೇಂದ್ರಿಯು।
ಇನಿತಾದ ಮೇಲೆ ಮೂಕತ್ವ ವಾಕ್ಯದಲ್ಲಿ।
ಎಣಿಸು ಹಸ್ತದಲಿ ಜೊಂಚಕನವು।

ಘನ ಹೇಳುವತ್ವವೆ ವುಂಟು ಪಾದಲ್ಲಿ ಪಾಯು ।
ಏನಲ್ಲಿ ಭಗಂದರ ಗುಹ್ಯದಲ್ಲಿ ಮೇಹ ।
ಗುಣಿಸು ಯಿಾಪರಿಯಲ್ಲಿ ಕರ್ಮೇಂದ್ರಿಯಂಗಳೈದು ।
ಗಣಿತ ಮಾಡಲು ಹತ್ತು ಕರಣದೋಷ ।
ವನೆ ನೋಡು ಪಂಚ ತನ್ಮಾತ್ರಗಳು ತಮೋಭಾಗ ।
ವನ ಸರಿಸಿ ಕೊಂಡಿವೆ ಯಿದರ ವಿವರ ।
ಜನರು ಕೇಳುವದು ಶಬ್ದದಲ್ಲೀಗ ಮೆ ।
ಲ್ಲನೆ ನುಡಿಪೋನುಡಿ ಸ್ಪರ್ಶದಲ್ಲಿ ।
ಎಣೆಗಾಣೆ ಮರ್ಮಾನನೆ ಯಿಾಬಗೆ ವುಂಟು ರೂ ।
ಪಿನಲಿ ದೂರಸ್ಥದ ನೋಟ ರಸದಿ ।
ತಿನಲಿಕ್ಕೆ ಬಾರದ ತಿಕ್ತಾದಿಗಳು ಮರ್ಮಾ ।
ಸನೆ ಗಂಧದಲ್ಲಿ ವುಂಟು ಕಾರಣ ರೂಪ ।
ದಿನ ಪ್ರತಿದಿನ ಯಿದಕೆ ಸಹಾಯವಾದ ಐ ।
ದನೆ ಪೇಳ್ವೆ ತಮ ಮೋಹ ಮಹ ಮೋಹ ತಾಮಿಸ್ರ ।
ಅನುಮಾನ ವಿಲ್ಲದೆ ಅಂಧ ತಾಮಿಸ್ರ ಸಜ್ಜ ।
ನರಿಗೆ ವಿಪರೀತ ಕೊಡುವ ಮಯ್ಯಾ ।
ಅಣುವಾಗಿ ಅಣುವಾಗಿ ಲಿಂಗ ದೊಡನೆ ಸು ।
ಮ್ಮನೆ ಯಿಪ್ಪವು ಯಿಂದ್ರಿಯಂಗಳು ಸಹಿತ ।
ಗುಣವೈಷಮ್ಯವಾಗೆ ಅನಿರುದ್ಧದಲ್ಲಿ ಪ್ರಯೋ ।
ಜನ ಕಾರ್ಯೋನ್ಮುಖವಾಗಿ ಮಾಡಿಪ್ಪವು ।
ದನುಜರಪುರದಲ್ಲಿ ಸ್ಥಾನಿಕರಾಗಿ ಸಾ ।
ಧನ ಮಾಡಿಸುವರು ಹರಿ ಆಜ್ಞೆಯಿಂದ ।
ಮನ ವಿಕಾರದದರಲ್ಲಿ ದೋಷ ಗಳಿರೆ ಲಿಂಗ ।
ತನುವಿನಲ್ಲಿ ಬಾಧೆ ಮಾಳ್ಪವಲ್ಲಾ ।
ಅನಿರುದ್ಧ ಕಾರ್ಯದಲಿ ಆದ ಕ್ಲೇಶಂಗಳು ಜೀ ।
ವನಕೆ ಅನುಭವ ವಕ್ಕು ಹರಿಯ ಶಕ್ತಿ ।

ಬಿನಗುಪದ್ರವ ಬರಲು ದೇಹಕ್ಕೆ ಯಿದೇ ಸ್ಥೂಲಾ ।
ತನುವಿಗೆ ಬರಲಾಗಿ ಅನಿರುದ್ಧಕ್ಕೆ ।
ಇನಿತು ತಿಳಿಯಬೇಕು ಅಹಂಭಾವದ ವೃತ್ತಿ ।
ಇನಿತು ನೋಡಿದರೆ ವಿಸ್ತಾರವೊ ।
ಅನಿಮಿಷ ತತಿಗಳಿಗೆ ತಾರ ತಮ್ಯವೆ ವುಂಟು ।
ನೆನಸು ಅಂಶಾವೇಶ ಅವತಾರವಿ ।
ಮುನಿ ಮನುಜಾದ್ಯರಿಗೆ ಯಿದೆ ಯಿದೆ ಪ್ರಕಾರ ।
ಅಣುಘನ ವಾಗಿದೆ ಕಾಲ ಭೇದ ।
ವನಜ ಗರ್ಭಗೆ ಮಾತ್ರ ದೋಷ ಕಾರ್ಯ ಗಳಿಲ್ಲಾ ।
ತನೆ ಸಮರ್ಥನು ಕಾಣೊ ಮುಖ್ಯ ಪಾತ್ರ ।
ಮನೆಯೊಳು ದೀಪಸ್ತಂಭದ ಸುತ್ತ ದೀಪಗೆ ।
ಯನು ಪೆಚ್ಚಿಸಿದರೆ ಕತ್ತಲೆ ಯತ್ತಲೋ ।
ಬಿನಗು ಕಾರಣ ರೂಪ ದೋಷದಿವಲಿ ಬೊ ।
ವ್ಯಕ್ತನಿಗೆ ಯೇನಾಗುವದೊ ಮಹಧೀಯನು ।
ವನಜಜಾಂಡದೊಳಗಾತ ಅಂಶಾಂಶಾವಿಷ್ಟ ।
ಗಣನೆ ಯಿಲ್ಲದಿರಲು ಪೊದೆ ಸಮಾನ ।
ಜನುಮಯ ಮಾರುತಿ ವೊಂದೇ ಹದಿನಾರು ನೇ ।
ಮನ ಮಾಡುತಿಪ್ಪನು ಆದಿವಿಡಿದು ।
ತೃಣಪೇಷ ಬಂದಾಗಲಿ ವ್ಯಾಪಾರವೆ ಯಿಲ್ಲಾ ।
ಕ್ಷಣ ಕ್ಷಣಕೆ ಸ್ಮರಣೆ ಅಂತರಂಗದಿ ।
ದನುಜರಿಪ್ಪರೈದು ಸ್ಥಾನದಲ್ಲಿ ಸಿರಿ ।
ವನಜನಾಭನ ಮೂರ್ತಿ ಪೇಳುವೆನೊ ।
ದನುಜ ಬಳಗಕ್ಕೆ ವೊದಲು ದನುಜ ಭಾಗ ಪ್ರಾಚುರ್ಯ ।
ಕೊನೆಗೆ ತಾಮಸದಿಂದ ಮಹಾ ನರಕವು ।
ಅನಳಾಕ್ಷ ವಿಶ್ವ ವೃತ್ತುಮಾಧಿಕಾರರಿಗೆ ।
ಜನನೆ ವುಂಟು ಸ್ವರ್ಗದಂಶದಿಂದ ।

ಜನನಿ ಗರ್ಭಾದಿಗಳು ಯಿವರಿಗೆ ಕ್ಲೇಶ ಕಾರ್ಯ ।
ಅನಿರಯುರವರೊ ಸ್ವರ್ಗದಿಂದಿತ್ತ ನೋಡಿ ।
ಮಾನುಜನ್ನ ಭೋಕ್ತ್ರಾದಿ ರಾಹಿತ್ಯರು ।
ಮನೋವಾಚ ಕಾಯದಲ್ಲಿ ವಿಪರೀತ ವೆಂಬೋದಿಲ್ಲ ।
ಮನುಜಾಂಗ ಧರಿಸಿದಾಗೆಲ್ಲ ವುಂಟು ।
ತನು ಹಾನಿ ಮಾಗದಃಭಯ ಶೋಕಾದಿಗಳು ಯೋ ।
ಚನೆ ಯಿಲ್ಲದಲೆ ವುಂಟು ತಾರತಮ್ಯದಿ ।
ಮನುಜಗ ರಂಭಿಸಿ ಮೂಲರೂಪ ಸಹಿತ ।
ಜನನವಾಗ ಮನು ಕರ್ಮದ ಧರಿಣೀಲಿ ।
ವನರುಹ ಕಲ್ಪದಲ್ಲಿ ಬೊಮ್ಮಗೆ ಶೋಕಾದಿಗಳು ।
ಅನಿಮಿಷ ತತಿಗಳಿಗೆ ಪ್ರಾಣ ಕಲಹ ।
ಇನಿ ದ್ವಿರಾಗ ಅಜಗುಪಚಾರ ಭಗವತ್ಪ್ರೀತಿ ।
ಎನಿಸುವದು ಮಿಕ್ಕ ಜನಕೆ ಸ್ವಲ್ಪ ।
ದಣಿಕೆ ಯಿಲ್ಲ ಕೇಳಿ ಪ್ರಬಲವಾಗಿರದು ವಂ ।
ಚನೆ ಯಿಲ್ಲ ಯಿಂಥಲ್ಲಿ ಪ್ರತ್ಯೇಕವು ।
ದಿನ ದಿವಸಕ್ಕೆ ಪ್ರಾರಬ್ಧ ಸೂಚಕವಾಗಿ ।
ಅನುಭವಕೆ ತಂದು ಕೊಡುತಿಪ್ಪದೋ ।
ಅಣುಮಹತ್ತ್ವಾದ ನಾನಾ ಯೋನಿ ರೂಪ ।
ವನೆ ಧರಿಸುವರು ನಿಮಿತ್ತವಾಗಿ ।
ಗುಣ ಪೂರ್ಣ ಸುಖಸಾಂದ್ರ ವಿಜಯ ವಿಠ್ಠಲನ್ನ ಅ ।
ರ್ಚನೆ ಮಾಡುವರು ವುತ್ತಮರ ವುಪದೇಶ ದಿಂದ ॥ ೩ ॥

ಅಟ್ಟ ತಾಳ

ತನಗಿಂದುತ್ತಮರ ದ್ರೋಹದಿಂದ ರುದ್ರಾದಿ ।
ಅನಿಮಿಷರಿಗೆ ಪ್ರಾಪ್ತವ್ಯ ಆನಂದಕ್ಕೆ ।
ಅನಭಿವ್ಯಕ್ತಿ ಯೆಂಬೋದೆ ಹ್ರಾಸ ಕಾಣಿರೋ ।
ಘನ ವಿಕರ್ಮದಿಂದ ಪ್ರಾರಬ್ಧ ಸೂಚಕ ।

ಮನಸಿಗೆ ಮಾತ್ರ ಖೇದ ಬಪ್ಪುದು ಅದು |
ಕ್ಷಣ ಪ್ರಕಾಶದಂತಿಪ್ಪದು ಅನಿತ್ಯ |
ಗಣನೆ ಯಿಲ್ಲದೆ ಪುಣ್ಯ ತಂದು ಕೊಡುವದು |
ರಣದೊಳು ವೃತ್ರಾದಿ ಹನನ ಸಜ್ಜನರ ರ |
ಕ್ಷಣೆ ಯಾಯಿತು ಯಿದರಿಂದ ಬಲು ಪುಣ್ಯ |
ಅನಿಮಿಷರೊಡೆಯಗೆ ಸಿದ್ಧವಾಯಿತು ಕೇಳಿ |
ವಿನಯದಿಂದಲಿ ಅಲ್ಪ ವಿಕರ್ಮದಿಂದಲಿ |
ಎನಿಪುದು ಬಾಹಂತ ಪುಣ್ಯಾಹಕ್ಕೆ ಹ್ರಾಸ |
ಸನುಮತ ಯಿದೆ ಅಲ್ಪಾಧಿಕಾರ ವಾದ |
ಜನಕೆ ಸ್ತೋತ್ರವರ ದ್ರೋಹದಿಂದ ಪ್ರಾಪ್ತವ್ಯ |
ಅನಭಿವ್ಯಕ್ತಿ ಮಹಾ ವಿಕರ್ಮದಲ್ಲಿ ಪುಂ |
ದಿನ ಪ್ರಾರಬ್ಧಕೆ ಸಹಾಯ ಪ್ರಾಪ್ತವ್ಯಕೆ ಹ್ರಾಸ |
ಬಿನಗುವಿಕರ್ಮಕೆ ಪುಣ್ಯಾಹಕೆ ಹ್ರಾಸ |
ಒಣಗದು ಮಹಾ ವಿಕರ್ಮಕೆ ಸಹಾಯ |
ಗುಣಿಸು ಯಿವರಿಗೆ ಕ್ಲಿಷ್ಟಾನಂದ ಕೆಡದಯ್ಯಾ |
ಕ್ಲಿಷ್ಟಿಗೆ ಕ್ಲಿಷ್ಟಾನಂದ ನಾಶನ |
ಅಣು ವಿಕರ್ಮದಿಂದ ಪುಣ್ಯಾಹ ನಾಶ ಮಹ |
ತ್ರಿನ ವಿಕರ್ಮಕ್ಕೆ ಸಹಾಯ ಕ್ಲಿಷ್ಟಿಗೆ |
ಅನಭಿವ್ಯಕ್ತಿ ಸಿದ್ಧ ಯಿವರೆ ನಿರಂತರು |
ಶ್ರೇಣಿ ವಿಧ ಮುಕ್ತಿ ಯೋಗ್ಯರು ಸಲಿಂಗದಲ್ಲಿ |
ಜನುಮ ಜನುಮ ತೆತ್ತು ಜ್ಞಾನೋತ್ತರದಲ್ಲಿ |
ವನಜ ಗರ್ಭನ ಕಲ್ಪ ಪರಿಯಂತ ತಮತಮ್ಮ |
ಮನಸಿನ ದೃಢ ಮಾಡಿ ಕೊಂಡಾಡಿ ಬಿಂಬೋಪಾ |
ಸನೆ ಮಾಡುವರು ಯಿದರಲ್ಲಿ ದ್ವಿವಿಧವಕ್ಕು |
ಜನಲೋಕದಿಂದ ಅಧೋಲೋಕ ಮೊದಲು ಮಾಡಿ |
ಜನರಿಂದ ಕರ್ಮ ಭೂಮಿಯು ತನಕ ನೋಡು |

ಪುನರಾವರ್ತಿಗಳುಂಟು ಅಪುನರಾವರ್ತಿಗಳುಂಟು ।
ಜನಲೋಕಾರಂಭಿಸಿ ವೈಲಕ್ಷಣ್ಯವಯ್ಯ ।
ಉಣತಿಪ್ಪರವರು ಪ್ರಾರಬ್ಧ ಕರ್ಮಂಗಳು ।
ಅನಪಾಲಕ ನಮ್ಮ ವಿಜಯ ವಿಠ್ಠಲನ್ನ ।
ಘನ ಮಹಿಮೆಗೆ ನಮಿಸಿ ಕೊಂಡಾಡುವರು ನಿತ್ಯ ॥ ೪ ॥

ಆದಿ ತಾಳ

ಉತ್ತಮಾಧಿಕಾರಿಗಳಿಗೆ ಜ್ಞಾನಪೂರ್ವಕದಲ್ಲಿ ।
ಮತ್ತೆ ಅವತಾರಂಗಳು ಧರಿಸಿರೆ ಕರ್ಮ ಕ್ಷಯು ।
ಉತ್ಕ್ರಾಂತಿ ಮಾರ್ಗ ವೆಂಬೋದೆ ಯಿಲ್ಲಾ ।
ಇತ್ತ ಅಲ್ಪಾಧಿಕಾರಿಗಳಿಗೆ ಮೂರು ಗಾತ್ರ ।
ತೆತ್ಯಾಗ ಸಮದಲ್ಲಿ ಸರ್ವವು ಸಿದ್ಧವಕ್ಕು ।
ಇತ್ತಂಡದವರ ತರುವಾಯ ವುಳ್ಳವರಿಗೆ ।
ಮರ್ತ್ಯದಲ್ಲಿ ಕರ್ಮ ಕ್ಷಯ ಭೋಗವಾಸ ವಾಗುವದು ।
" ಸತ್ಯಂಭಿದಾ ಸತ್ಯಂಭಿದಾ " ವೆಂಬೋ ವಾಕ್ಯದಲ್ಲಿ ।
ತತ್ವಾಭಿಮಾನಿಗಳು ವಿಕ್ಕಾದಪ್ರಾಣಿಗಳು ।
ನಿತ್ಯ ಜ್ಞಾನ ಭಕ್ತಿ ವೈರಾಗ್ಯದಿಂದಲಿ ।
ಚಿತ್ತಜನಯ್ಯನ ಪೂಜಿಪರೊ ।
ಸತ್ವಪ್ರವರ್ತಿ ಯಿಲ್ಲ ಹರಿಯಾಧೀನ ಚಿಂತಿಸಿ ।
ಎತ್ತ ನೋಡಲು ಅತ್ತ ಧೇನಿಪರೋ ।
ವರ್ತಮಾನದಲ್ಲಿ ಮಾಡುವ ಕಾಮ್ಯ ಕರ್ಮ ।
ಅತ್ಯಂತವಾಗಿದೆ ಇಷ್ಟಾನಿಷ್ಟ ಪುಣ್ಯ ।
ಮೊತ್ತ ದ್ವಿವಿಧ ಚನ್ನಾಗಿ ಭಗವದ್ದರ್ಶನ ।
ಚಿತ್ತುವಿನಲ್ಲಿ ಇಬ್ಬಗೆ ಪುಣ್ಯಂಗಳು ।
ಪ್ರತ್ಯೇಕವಾಗಿ ಇಷ್ಟ ಮೋಕ್ಷಕ್ಕೆ ಕಾರಣ ।
ಮತ್ತೆ ಅನಿಷ್ಟ ಪುಣ್ಯ ಸುಹೃತ್ತಮರಿಗೆ ಪ್ರಾಪ್ತಿ ।
ದೈತ್ಯ ಜಾತಿಗೆ ಮಾಡಿದ ಪಾಪ ಪೋಗುವದು ।

ಉತ್ತಮರು ದ್ವಿವಿಧರು ಅನಾರಬ್ಧ ಕಾಲದಲ್ಲಿ ।
ಆರ್ತ ವಿದೂರರಾಗಿ ಬಿಂಬನ್ನ ನೋಳ್ಪಾಗ ಇದ್ದರು ।
ನಿತ್ಯದಲ್ಲಿ ಮಾಡಿದ ಇಷ್ಟಾನಿಷ್ಟ ಪುಣ್ಯ ।
ತತ್ತಳ ವಿಲ್ಲದೆ ಇಷ್ಟ ಪುಣ್ಯ ಆನಂದಕ್ಕೆ ।
ಜತ್ತಾಗಿಪ್ಪೋದು ವೃದ್ಧಿಗೆ ಕಾರಣ ।
ದತ್ತವಾಗುವದು ಅನಿಷ್ಟ ಪುಣ್ಯ ಪುಣ್ಯರಿಗೆ ।
ಬಿತ್ತರಿಸುವೆ ಪಾಪ ಆನಂದಕ್ಕೆ ತಡವು ।
ಸತ್ಯವಾಹದು ಯಿವಕ್ಕೆ ಕ್ಲಿಷ್ಟಿಗೆ ನಾಶವಿಲ್ಲಾ ।
ಸೋತ್ತಮ ಮಧ್ಯಮ ಅಧಮ ರೊಳು ವಿವರ ।
ಉತ್ತರ ಇವೇ ಕೇಳಿ ಶೋಧಿಸಿ ತಿಳಿಯಬೇಕು ।
ಪ್ರತ್ಯಕ್ಷ ಪಾರಂಪರೆ ಎರಡು ಬಗೆ ಪ್ರಾರಬ್ಧ ।
ಹತ್ತಿ ಕೊಂಡಿಪ್ಪದು ತಾರತಮ್ಯದಿಂದ ।
ಮಾತ್ರ ಕಾಲಭೇದ ಪಾದ ಮಾತ್ರಾ ಯಿಕ ।
ಮಾತ್ರಾ ಷಣ್ಮಾತ್ರಾ ಕಾಲ ಮುಹೂರ್ತ ಯಿದೇ ಬಿಡಿ ।
ಚಿತ್ರಾದಿ ಕಾಣಲು ಜ್ಞಾನಿಗೆ ವೈಕುಂಠ ।
ಸತ್ಯ ತಪೋ ಜನ ಮಹಾದಿ ಲೋಕವಾಸ ।
ತೀರ್ಥ ಪಾತ್ರ ಪಾಣಿಗೆ ಬಿಂಬ ಮೂರ್ತಿ ಸ್ಪಷ್ಟತ್ವ ।
ಕೃತ್ತಿವಾಸಗೆ ಪ್ರತಿಬಿಂಬದಂತೆ ಬಿಂಬಾ ।
ದಿತ್ಯಗಣಕೆ ಸೂರ್ಯ ಮಂಡಲದಂತೆ ಸಿದ್ಧಾ ।
ಈತೆರದಲ್ಲಿ ಪುಂಟು ಒಂದು ಎರಡು ಮೂರು ನಾಲ್ಕು ।
ಹತ್ತು ಇಪ್ಪತ್ತು ಮೂವತ್ತು ಐವತ್ತು ನೂರು ಇನೂರು ।
ಹತ್ತುನೂರು ಲಕ್ಷ ಕೋಟಿ ಶತಕೋಟಿ ಲಿಪ್ಪ ।
ಅತ್ತಿಶಯವಾಗಿ ಅನಂತಾನಂತ ತನಕ ।
ತತ್ತಳಿಸುವ ಭಗವನ್ ಮೂರ್ತಿಯ ನೋಳ್ಪರು ಅ ।
ನಿತ್ಯ ಅನಾದಿ ವಸ್ತು ಇದ್ದಾಗ ಸಾಂತಿಗಳು ।
ಮರ್ತ್ಯ ಗಂಧರ್ವ ವಿಡಿದು ಜಂಗಮ ಸ್ಥಾವರ ತೃಣಾಂತ ।

ತತ್ತ್ವದ್ದೇಹದಲ್ಲಿ ಮಿಂಚು ದೀಪದಂತೆ ।
ಪೃಥ್ವಿ ಮಂಡಲ ಮೇರು ಸ್ವರ್ಗಾದಿ ವುನ್ನತೋನ್ನತ ।
ಕೃತ್ಯವಂತರಾಗಿ ಕಾಂಬೋರು ವೈಚಿತ್ರಕಾ ।
ಪೂರ್ತಿ ಸಾಧನಕೆ ಭೂ ದ್ಯೂ ಸೂರ್ಯ ಅಗ್ನಿ ಲೋಕಾ ವೇ ।
ಲತ್ತ ಪೋಗುವರಯ್ಯ ತಮ್ಮ ಯೋಗ್ಯತಾ ನಿತು ।
ಹತ್ತದೆನ್ನದಿರು ಗುಣ ರೂಪ ಕ್ರಿಯಂಗಳು ।
ತತ್ವೇಶರಲ್ಲಿ ಶ್ರೀ ಹರಿಯಲ್ಲಿ ಪರಸ್ಪರ ।
ಸೂತ್ರ ಪ್ರಾಣ ಪ್ರಕೃತಿ ಸಹ ಪೂರ್ಣ ವೈಲಕ್ಷಣ್ಯ ।
ಕ್ಷೇತ್ರಜ್ಞ ನರಸಿಂಹಾದಿ ಮೂರ್ತಿಗಳು ದಿವ್ಯ ।
ಹತ್ತರ್ಧಮೇಲೆ ವೊಂದು ಬಗೆ ವುಪಾಸನೆ ವುಂಟು ।
ತತ್ವಮತದ ಜ್ಞಾನ ಭಕುತಿ ಯಿಂದ ಮಾಡುವರು ।
ಸತ್ಯವೇ ಯಿದೇ ಸರಿ ಯಿದಕಿಂತ ಪಾರ ವಕ್ಕು ।
ಉತ್ಕ್ರಾಂತಿ ಮಾರ್ಗ ಭೋಗ ಕರ್ಮದ ವಿವರವ ।
ಕೀರ್ತಿಸಿ ಪೇಳುವೆನು ಮುಂದಣ ಪದದಲ್ಲಿ ।
ಸ್ಫೂರ್ತಿಯಾದಷ್ಟು ಬಿಡದೆ ಗುರುಗಳ ದಯದಿಂದ ।
ಭೃತ್ಯವತ್ಸಲ ಸಿರಿ ವಿಜಯ ವಿಠ್ಠಲರೇಯನ ।
ಸ್ತೋತ್ರವನ್ನು ಮಾಡೆ ಮುಕ್ತಿಗೆ ಸೋಪಾನಾ ॥ ೫ ॥

**ಜತೆ**

ಖಂಡಾ ಖಂಡ ಧ್ಯಾನ ಸ್ಮರಣೆ ಸಮಾಧಿಯಿಂದ ।
ಖಂಡೇಶರಸ ವಿಜಯ ವಿಠ್ಠಲನ ನೋಳ್ಪದು ॥ ೬ ॥

೧೬ ನೇ ಸುಳಾದಿಯು ಕಠಿಣ ಶಬ್ದಾರ್ಥ

ಸಂಸೃತಿ - ಸಂಸಾರ, ಭದ್ರ – ಮಂಗಳ, ಖದ್ಯೋತ ಸಾರಥಿ – ಅರುಣ ಅಬ್ದ – ಸಂವತ್ಸರ, ಅಧ್ವರ - ಯಜ್ಞ, ಕದ್ರುವೆ ಮಕ್ಕಳು - ಸರ್ಪ, ಹರಿಗದ್ದುಗೆ - ಸಿಂಹಾಸನ, ಅದ್ಯರ್ಘ್ಯಪತಿ - ಲಕ್ಷ್ಮೀ ಪತಿ ನಾರಾಯಣ, ಕಾಚು – ಕನ್ನಡಕ, ಪ್ರೋಷಾದಿಯ – ಉರಿಯೋಣ ಉನ್ನಾಹ-ವೃದ್ಧಿ; ಅನಿ – ವಾಯು; ಕೃತ್ತಿವಾಸ - ರುದ್ರ; ಖಂಡೇಶಸ – ಪೂರ್ಣ

# ೧೭ ನೇ ಬೃಹತ್ತಾರತಮ್ಯ ಸುಳಾದಿ

## ರಾಗ ಭೈರವಿ    ಧ್ರುವ ತಾಳ

ಬೊಮ್ಮ ಜನಕ ಪರಮ ಮಂಗಳ ಮೂರ್ತಿ ಪರ ।
ಬೊಮ್ಮ ಬ್ರಹ್ಮಾಂಡ ಕರ್ತ ರಿಪು ಭೈರವ ।
ರಮ್ಮೆಯರಸ ಸರ್ವ ಜೀವಾಂತರಯಾಮಿ ನಿತ್ಯ ।
ಪುಮ್ಮತ ಪೂರ್ಣ ಅಂತರಾತ್ಮ ರಾಜಾಧಿರಾಜನೋ ।
ಶ್ಯಮ್ಮ ತುಂಗ ಮಹಿಮ ವೃದ್ಧಿ ಹ್ರಾಸ ವರ್ಜಿತ ।
ಸಮ್ಮೋದಾ ಮೋಹ ಭಕ್ತಜನ ವರ್ಗಕೆ ।
ಅಮ್ಮಿಶ್ರ ಪರಾಕ್ರಮ ಸರ್ವಾವಸ್ಥಾಪ್ರೇರಕ ।
ನಿಮ್ಮಿತ್ತ ಬಂಧು ಭವಾರ್ಣವ ತಾರಕಾ ।
ಸಮ್ಮೋಹಕಲ್ಪಿಸಿ ಜಗವ ವಂಚಿಸುವನೊ ।
ಸನ್ಮ ಚಿತ್ರ ಚರಿತ ಜ್ಞಾನೈಶ್ವರ್ಯ ।
ದುಮ್ಮಾನ ದೂರ ದುರ್ಧರಸುಶೀಲಾಗ್ರಣಿ ಪ ।
ರಮ್ಮಾತ್ಮ ಸಮಸ್ತಾವಸ್ಥಾಭೇದ ।
ಅಮ್ಮಿರಿತ ದಾತಾ ಖ್ಯಾತ ಪ್ರಖ್ಯಾತನೀತಾ ।
ಅಮ್ಮಿಯ ಸವಿದ ಬಾಲ ಮುಗ್ಧಶೀಲಾ ।
ಚಮ್ಮತ್ಕೃತಿಯಿಂದ ಉತ್ಪತ್ತಿ ಮೊದಲಾದ ।
ಸಮ್ಮತಿಳಿಸಿ ಮಾಡುವ ಮಹಾಭಾಗ ।
ಅಸ್ಮಯವಿಲ್ಲದೆ ನಾನಾ ಶಕ್ತಿ ವ್ಯಕ್ತ ಕ್ರಿಯಾ ।
ಒಮ್ಮೊಮ್ಮೆ ನೆಸಗುವ ನಾರಾಯಣಾ ।
ಸಮ್ಮತ ನೆನೆವ ಅವರವರ ಸಂಗಡ ।
ಸಮ್ಮಂಧವಾಗಿದ್ದು ನಿರ್ಲೇಪನು ।
ನಿಮ್ಮಿಷ ಮಾತ್ರದೊಳು ಅತ್ಯಣುವಾಗಿ ಬಳು ।

ಬೊಮ್ಮಾಂಡವನ್ನು ಕೊನೆಯು ಪ್ರಗುಣನಿಂದ |
ಚಮ್ಮಾವ ಚಿನ್ಮಾಂಬರ ಚನ್ನ ಅಚ್ಛಿನ್ನ ದೈವಾ |
ಗಮ್ಮ ಗರುಡಗಮನ ಗಂಗಾಜನಕ |
ಅಮ್ಮಿತ ಜೀವಿಗಳ ಅಂಶಿ ಆವೇಶಾವೇಶ |
ಸಮ್ಮರ್ಶಕವಾಗಿ ನಡೆವ ತೆರದಿ |
ಕ್ರಮ್ಮಾನುಸಾರದಿಂದ ಸಂಸಾರಾವಸ್ಥ ಮುಕ್ತಿ |
ಇವ್ಮಹಿಯಲ್ಲಿ ಯೋಗ್ಯತಾದಂತೇವೆ |
ಸುಮ್ಮತಿ ಯಿದೆ ಸತ್ಯ ಮುಕ್ತಿಯಲಾವೇಶ ಯಾಕೆ |
ಹಮ್ಮ ಸಂಸಾರಾವಸ್ಥೆಯಲ್ಲಿ ವುಂಟು |
ಹಿಮ್ಮಿಟ್ಟದಲಿ ನೀಚೋಚ್ಚ ಆವೇಶ ಬೇಕು |
ತಮ್ಮತಮ್ಮೊಳಗೆ ವೈಷಮ್ಯ ಪೊಡಗೆ ವು |
ಕ್ರಿಮ್ಮ ಮಧ್ಯಮ ಜನಕೆ ಆವೇಶವಕ್ಕ ಮನುಜೋ |
ತ್ಯಮ್ಮ ವಿಕ್ಕಾದ ಯಿದೇ ಗಂಧರ್ವರಿಗೆ |
ಒಮ್ಮಿಗಾಚರು ಪ್ರಯೋಜನ ವಿಲ್ಲ ಅಂಶಗಳಿಲ್ಲ ವು |
ತುಮ್ಮರಾವೇಶ ನೀಚರೊಳು ಸ್ವಭಾವಾ |
ಧಮ್ಮರಿಗೆ ಬಪ್ಪದು ವರಬಲದಿಂದ ತಾರ |
ತಮ್ಮ್ಯವೆ ಕೇಳುವದು ಪೊರಿದು ಸುಜನ |
ತಮ್ಮೋ ಯೋಗ್ಯರಾವೇಶಾ ಮುಕ್ತರೊಳಗೆ ಉಂಟು |
ಹಮ್ಮಿಸಿಂದಲಿ ಕರ್ಮ ಮಾಳ್ಪರಯ್ಯ |
ಬೊಮ್ಮ ಮಾತುರ ಓರ್ವ ಅಚ್ಚ ಬುದ್ಧಿಯಲಿಪ್ಪ |
ನಮ್ಮಿಸಿಕೊಂಬ ಜೀವ ಕೋಟೀನು |
ಸೌಮ್ಯ ಗುಣಾಂಬುಧಿ ವಿಜಯ ವಿಠ್ಠಲ |
ಪುರುಷೊತ್ತಮ ಏಕಮೇವ ಸರ್ವಗುಣಾಧಿಕನು |

ಮಟ್ಟ ತಾಳ

ಹರಿ ಸರಸಿಜ ಸದನೆ ಅವತಾರಾವೇಶ |
ಪರಿ ಪೂರ್ಣವೆನ್ನಿ ಜ್ಞಾನಾದಿಯಲ್ಲಿ |

ಶಿರ ನಖ ಮೊದಲಾಗಿ ರೋಮ ರೋಮ ಪ್ರೊಳಗೆ ।
ಪರಿಭೇದಗಳಿಲ್ಲ ಒಂದೊಂದು ಠಾವಿನಲಿ ।
ಸರುವ ವ್ಯಾಪಾರವಕ್ಕು ಸಂತತ ಗುಣಿಸಿದರು ।
ಪರಿಮಿತ ಕಾಣಿಸರು ಅಧಿಕಾರಿಗಳೆಣಿಸೆ ।
ಹರಿಯಿಂದಲಿ ಲಕುಮಿ ಅನಂತಾನಂತ ।
ಪರಮಾನಂತ ಗುಣಕ್ರಿಯಾನಂದ ।
ಪರಿಪರಿ ಸೌಖ್ಯದಲಿ ನೀಚಳೆನಿಸುವಳು ।
ನಿರುತ ಮುಕ್ತಳು ಮುಕ್ತಾಮುಕ್ತರ ಕೈಯಿಂದ ।
ಪರಿಚಾರಕ ತನವು ಕೊಳುತಲಿಪ್ಪಳು ನೋಡಿ ।
ಎರಡೊಂದು ಗುಣಗಳಿಗೆ ಅಭಿಮಾನಿನಿಯಾಗಿ ।
ಜರೆ ಮರಣ ಜನನ ಶೂನ್ಯಳಪ್ರಾಕೃತ ।
ಶರೀರಳತಿಕಾಂತಿ ವರ ದಕ್ಷಿಣಾ ಯಜ್ಞಾ ಅಂಭೃಣಿ ಹ್ರೀದೇವಿ ।
ಸಿರಿ ಲಕುಮಿ ಶ್ರೀಧರ ದುರ್ಗಾ ಮಾಯಾ ।
ತರುವಾಯ ಜಯ ಕೃತಿ ಶಾಂತಿ ಜಯಂತಿ ।
ಧರಣಿಯಿಂದಲಿ ಬಂದ ಜಾನಕಿ ರುಗ್ಮಿಣಿ ।
ಕರುಣಿ ಸತ್ಯಭಾಮಾ ವೇದವತಿ ದೇವಿ ।
ಕರಿಸಿ ಕೊಂಬಳು ಒಂದಾನೇಕ ನಾಮಗಳಿಂದ ।
ಹರಿ ಅವತಾರಗಳು ಯೇಸೇಸಾಗುತಿರೆ ।
ಸಿರಿ ದೇವಿ ಆತನ್ನ ಅನುಸರಿಸಿಕೊಂಡು ।
ಧರಿಸುವಳು ರೂಪ ಕಲ್ಪಕಲ್ಪಕೆ ಬಿಡದೆ ।
ಸಿರಿ ಹರಿ ರೂಪಕ್ಕೆ ವ್ಯಕ್ತಿ ಸ್ಥಾನ ಭೇದ ।
ಅರೆಮರೆ ಇಲ್ಲದಲೇ ಅನುಭವ ಯೇಕವೆನ್ನಿ ।
ಕರತಳದೊಳಗಿದ್ದ ರೇಖೆಯಂತೆ ಜಗವ ।
ನಿರೀಕ್ಷಿಸುವಳು ತನ್ನಜ್ಞಾನ ದೊಳಗಾನಂತ ।
ಪರಿಮಿತದೊಳಗೊಂದು ಒಂದು ಪ್ರದೇಶದಲ್ಲಿ ।
ಹರಿಗೋಲು ಮಹಾ ಪ್ರಳಯಸಾಗರ ಮಧ್ಯೆ ।

ಕುಂದದಲೆ ಪ್ರಕೃತಿ ಮಹಾತತ್ವ ಮೊದಲಾಗಿ |
ಒಂದೊಂದು ಬಣ್ಣದಲಿ ಯಿರಾವರ್ಜನ ಯಿಪ್ಪರು |
ಸಂದೇಹ ವಿದಕಿಲ್ಲ ವಿಶಿಷ್ಟ ವರಣಾರ |
ವಿಂದ ಗರ್ಭಾಂಡ ವ್ಯಾಪಿಸಿಕೊಂಡು ಅನುದಿನ ।
ಒಂದೊಂದು ಅಂಶಿ ಅಂಶಗಳು ಪೂರಿತರಾಗಿ ,
ಸಾಂದ್ರವಾಗಿ ಬಿಡದೆ ನದಿಯೊಳು ಮಳಲಂತೆ |
ಪೊಂದಿಪ್ಪರು ಅತ್ಯಂತ ಅಣುವಾಗಿ ಚನ್ನಾಗಿ |
ಬಂದು ತಿರಿಗಾಡುವರು ಮೂಲ ತ್ರಿಗುಣದಲಿ |
ಒಂದು ಕಡೆಯಲಿ ವಾಸ ಎರಡರಲಿ ಸಂಚಾರ |
ಸಂದೇಹ ವಿಲ್ಲದೆ ಯಿವರಿಗೆ ಹರಿ ತಾನೆ |
ಎಂದದಿ ಕಾಣಿಸುವ ಪ್ರಕೃತಿಯು ಕೊನೆಯಲ್ಲಿ |
ಹಿಂದೆ ಪೋದಾ ಜೊಮ್ಮ ಪೋಗೋ ಪ್ರಧಾನದಲ್ಲಿ |
ನಿಂದಿಹ ಈ ಜೊಮ್ಮ ಪೋಗುವ ತನಕಲ್ಲಿ |
ಎಂದೆಂದಿಗೆ ಯಿವರು ಋಜುಗಣಸ್ಥರು ದೋಷ |
ಗಂಧ ದೂರರು ಪರಮೋತ್ಸರ್ಜನೆ ಪೊಂದುಂಟು |
ಮಂದ ಮತಿಗಳಲ್ಲ ಭಗವತ್ಪ್ರೀತಿ ಯಾಗ |
ಲೆಂದು ಸಂಸಾರವನು ಪಥಿಕರಿಸಿ ಕೊಂಡಿರ್ಪು |
ಮುಂದಾಲೋಚನೆ ಯಿಲ್ಲ ಯುಗಪದಿ ಪ್ರವಾಹ |
ದಿಂದ ನೋಡುವರಯ್ಯ ಜಗದ್ವಿಷಯ ವ್ಯಾಪಾರ |
ಸಂದೋಹ ಜೀವಿಗಳ ನೋಡೆ ಯಿವರ ರೂಪ |
ಅಂದವಾಗಿವೆ ಕೇಳ ಅನಂತ ಬಗೆಯಿಂದ |
ಮಂಧಿಯಂತೆ ಲಿಂಗ ಬಾಧೆ ಯಿಲ್ಲವರಿಗೆ |
ಇಂದಿರಾರಮಣನ್ನ ಇಚ್ಛೆ ಅಂಥದೆನ್ನಿ |
ಬಂದು ತೊಂಭತ್ತೊಂದು ಪೊಂಭತ್ತು ಜನವು |
ಸಂದುವದೆ ಪ್ರಾರಬ್ಧ ಕರ್ಮಗಳೆಲ್ಲ |

ಇಂದಿನಾಬೊಮ್ಮನಿಗೆ ಚರಮ ದೇಹ ವಕ್ಕು ।
ಮುಂದೆ ಬರುವ ಜನಕೆ ಯಿದೆ ಯಿದೇ ಪ್ರಕಾರ ।
ಕಣ್ದೆರೆದು ನೋಡುವರು ಸ್ಪಷ್ಟತ್ವದಲಿ ಭೇದ ।
ದಿಂದಲಿ ತಮತಮ್ಮ ಬಿಂಬೋಪಾಸನ ಮಾರ್ಗ ।
ಒಂದೆ ಸಮ ಬ್ರಹ್ಮ ವಾಯುಗಳಿವರಲ್ಲಿ ।
ಬಿಂದು ಮಾತುರ ಹೆಚ್ಚು ಪದವಿಯಲಿ ಗುಣಿಸೆ ।
ಸುಂದರಾಂಗ ಸಿರಿ ರಂಗ ನರಸಿಂಗನ ।
ಹಿಂದಾಗದೆ ಭಜಿಸುವರು ಯೇಕಾನೇಕ ಯೆಣಿಸಿ ।
ತಂದೆಯೆಂಬೊ ಭಾವದಲಿ ಮೆಚ್ಚಿಸುವರು ।
ಸಿಂಧುವಿನೊಳಗಿದ್ದ ದೇವನ್ನ ಬಳಿಕಾರಿ ।
ದ್ವಂದ್ವಾತೀತರಾಗಿ ಆತ್ಮನ್ನ ಬಹಿರಂಶ ।
ವೃಂದಾರಕ ತಮ್ಮ ಸಮೇತ ಕಾಂಬುವರು ।
ಬಂಧುಗಳಾಗಿ ಸರ್ವರನ್ನು ಪಾಲಿಸರು ಗೋ ।
ವಿಂದಂಗೆ ಪ್ರತಿಬಿಂಬ ಆಭಾಸ ರೂಪದಲಿ ।
ಸಂದರುಶನವಯ್ಯ ಜೀವಾತ್ಮ ಯಿವರಿಗೆ ।
ಸಂಧಿಕಾಲದಲಿ ಪ್ರವಾಹ ಗತಿಯಂತೆ ।
ವೃಂದಾರಕ ಜ್ಯೇಷ್ಠಗವತಾರ ವಿಲ್ಲವ ।
ಸುಂಧರಾದಲ್ಲಿಗಾವೇಶ ಮಾತುರ ವುಂಟು ।
ಗಂಧ ವಾಹನ ದೇವ ಅವತಾರಾವೇಶದಲ್ಲಿ ।
ಛಂದದಿಂದಲಿ ವೊಪ್ಪುತಿಹನು ಯುಗ ಯುಗದಲ್ಲಿ ।
ಇಂದ್ರರ ಮಧ್ಯದಲಿ ರೋಚನ ಅಂಜನ ।
ನಂದನ ಹನುಮಂತ ಭೀಮ ಮಾಯಿಯ ಗಂಡ ।
ನಂದ ತೀರ್ಥರಾಯ ಪಂಚ ಪ್ರಾಣ ರೂಪ ।
ಕುಂದಣಕಚ್ಚುಟ ಧರಿಸಿ ಕಪಿಲಾತ್ಮಜರು ।
ಒಂದಾದರು ಲೋಕದಲಿ ಯಿಷ್ಟ ಪ್ರಧಾನಾಂಗ ।

ಹಿಂದಣ ಲಾತವ್ಯ ಬೊಮ್ಮ ಪಟ್ಟಕೆ ಸಿದ್ಧ ।
ಒಂದೆರಡೇರೂಪ ಪ್ರತ್ಯೇಕಾಧಿಷ್ಠಾನ ।
ಮುಂಪೆ ವಿಸ್ತರಿಸುವೆ ಯಿವರಿವರಾವೇಶ ।
ವೃಂದಾವನಪತಿ ವಿಜಯ ವಿಠ್ಠಲನ ಗುಣ ।
ವೃಂದ ಕೊಂಡಾಡುವರು ತ್ರಿಕಾಲ ವೈದಿಕರು । ॥ ೩ ॥

ಝಂಪಿ ತಾಳ

ಮತ್ತೆ ವಾಯುರೂಪ ಸೂತ್ರ ಮಹಾನ್ ಬ್ರಹ್ಮ ।
ಚಿತ್ತ ಪ್ರತಿಸುಖ ವೇದ ಮುಕ್ತಿ ಅಧಿಗೋಪ ।
ತತ್ತ್ವಳಿಸುವರು ಖರಾ ವಿಜ್ಞಾತ ಮಹಾಕೃಗರು ।
ಸತ್ಯವಿರಂಚಿ ತ್ರಿಕೋಟಿ ಪ್ರಾಣ ಧೃತಿ ಬಲ ।
ಸ್ಥಿತಿ ಯೋಗ ವೈರಾಗ್ಯ ಮಹಾವಿಷ್ಣು ।
ಭಕ್ತಿ ಜ್ಞಾನ ಪ್ರಾಜ್ಞ ಮಹಾ ಪ್ರಭು ಸಮಾನ ।
ಧ್ಯಾತ ಬಲಿ ಪುರುಷ ಪರಶುಕ್ಲತ್ರಯ ಗಣನೆ ।
ಈ ತೆರದಿ ರೂಪಗಳು ಯಿಪ್ಪತ್ತೈವತ್ತು ।
ಸತ್ವ ಸತ್ವ ಸತ್ವ ಸತ್ವ ಶರೀರಗಳು ।
ಉತ್ತಮರು ಜೀವ ಕೋಟೀಶರು ।
ಉತ್ತಮೋತ್ತಮ ಹರಿಯ ಗುಣ ರೂಪ ಕ್ರಿಯಾ ಅ ।
ಮಿತ್ತ ಬಗೆ ಅನಂತಾನಂತ ವಿಧದಿ ।
ಎತ್ತ ನೋಡಿದರತ್ತ ಭಜಿಸುವರು ನವ ವಿಧ ।
ಭಕ್ತಿ ಪರಿಪೂರ್ಣದಿ ಸನ್ಮನದಿ ।
ಪ್ರತ್ಯಕ್ಷ ಕಾಂಬುವರು ನಿಜ ಬಾಹಿರ ಮೂರ್ತಿಗಳನು ।
ಪ್ರತ್ಯೇಕ ಪ್ರತ್ಯೇಕ ರೂಪದೊಳಗಾನಂತ ।
ಸತ್ಯ [illegible] ಪ್ರಾಣನ ಹೊರಗೆ ।
ಚಿತ್ತು ಮಾತ್ರದ [illegible] ।
ಸತ್ಯ [illegible] ।

ನಿತ್ಯದಲಿ ಶ್ವಾಸ ದೋಷಾದಿ ವೆಂದವಿ ಸ್ಮರಣೆ ॥ ೪ ॥

ತ್ರಿವಿಡಿ ತಾಳ

ಸರಸ್ವತಿ ಭಾರತೀ ಪ್ರೋಕ್ತೆ ಸರ್ವಜ್ಞರು |
ಇರುತಿಪ್ಪರು ಯಿವರೆ ಅಜವಾಯು ಸತಿಯರೂ |
ನಿರುತ ತಮ್ಮಾಶ್ರಿತನ ನೋಡೆ ಪೊಂದು ನೂರು |
ಪರಿಮಿತಗುಣದಿಂದ ಕಡಿಮೆ ಯೆನಿಸುವರು |
ಚರಿತೆ ಯೆನಿತು ಪ್ರಂಟು ಮಹ ತತ್ವಕ್ಕಭಿಮಾನಿ |
ಕರಿಸಿಕೊಂಬುವರು ಪ್ರಕೃತಿ ಶಬ್ದದಿಂದಲಿ |
ಹರಿಯೆ ಕೇವಲನೆ ಮಾಡುವರು ಗುಣರೂಪ |
ಪರಿಪೂರ್ಣ ಪ್ರೋಪಾನಂತ ಬಗೆ ತಿಳಿದು |
ತರುವಾಯವು ಕ್ರೀಯಾ ಪ್ರೊಂದೆ ನೆರದು ವೇದೋಕ್ತದಲಿ |
ಪರಮ ಭಕ್ತಿಯಿಂದ ಪೂಜಿಸುವರು |
ಸರಸ್ವತಿ ಭಾರತಿ ಶ್ರದ್ಧಾ ಸರ್ವವೇದಾತ್ಮಕರು |
ಗುರು ಭಕ್ತಿ ಅನುಭೂತಿ ಸರ್ವ ಮಂತ್ರಾತ್ಮಕೆ |
ಹರಿ ಪ್ರೀತಿ ಶಿವಕನ್ಯಾ ಪ್ರಾಣದ ಪ್ರೀತಿ ಬದ್ಧ |
ವರ ಯಿಂದ್ರಸೇನಳು ಗಾಯಿತ್ರಿ ಸಾವಿತ್ರಿ |
ಹರುಷದಿಂದಲಿ ಚಂದ್ರಾ ಭೋಜಿ ಸುಖಾತ್ಮಕ ಕಾಸಿಬಾ |
ಪರಿಶುದ್ಧರಿವರಯ್ಯ ಮಹತತ್ವದೊಳಗೊಂದು |
ಪರಿಚ್ಛೇದ ಬಿಟ್ಟು ಉಳಿದಲ್ಲಿ ವ್ಯಾಪ್ತರು |
ಹರಿಯು ಕಾಂಬುವರು ಸ್ವಶಕ್ತ್ಯನುಸಾರ ಭೇದ |
ಸಿರಿದೇವಿಗೆ ಯಿವರು ಪ್ರತಿಬಿಂಬರೆನಿಸುವರು |
ಪರಮ ಪುರುಷ ರಂಗಾ ಯಿವರ [illegible] |
ಬರಿಸುವರು ತಮ್ಮ ಪತಿಗಳಿಂದ ಗಳದೆ |
[illegible] |
[illegible] |

ಚರಣ ಕಮಲವನ್ನು ಪ್ರತಿದಿನ ಸ್ಮರಿಸುವರು ॥ ೪ ॥

ಧ್ರುವ ತಾಳ

ಪನ್ನಗರಿಪು ಪುರಗ ರುದ್ರರು ಪೊಂದೆಸವಾ ।
ಗುಣ್ಣವಂತರು ಕಾಣೋ ವಾಣಿ ಭಾರತಿ ಗಿಂತ ।
ಚನ್ನಾಗಿ ನೂರು ಗುಣಾವೆಗ್ಗಳ ವೆನಿಸುವರು ।
ಇನ್ನು ಯಿಾ ಜ್ಞಾನಿಗಳ ಅವತಾರ ಅನೇಕ ।
ಬಣ್ಣಿಸುವೆನು ಕೇಳಿ ಗರುಡಗವತಾರವಿಲ್ಲ ।
ಪನ್ನಗಾರಿ ಗೀಚುರವುಣ ಪೊಂದೆ ವ್ಯಾಪಾರವವರು ।
ಇನ್ನಿತು ಯಿವರಿಗೆ ಪದವಿ ತಾರತಮ್ಯ ।
ಪುಣ್ಯವಂತರು ಅಹಂ ತತ್ವಕ್ಕೆ ಅಭಿಮಾನಿ ।
ಅನ್ನಂತ ಕಾಲಕ್ಕೆ ವ್ಯಾಪ್ತ ದರ್ಶಿಗಳು ಪ್ರ ।
ಸನ್ನರಾಗುವರು ಯಿಂದ್ರಾದ್ಯ ಭಕುತ ಜನಕೆ ।
ಕಣ್ಣಿನಲಿ ನೋಡುವರು ಮಹ ತತ್ವಧಲಿ ಇದ್ದಾ ।
ಕನ್ಯಾ ಲಕುಮಿ ಪತಿಯ ತಾರಕಿ ಯೆಂದದಲಿ ।
ಮನ್ನೆ ತಮ ತಮ್ಮ ಸ್ವಸ್ಥಾನದಲ್ಲಿ ಹರಿಯ ।
ಚಿನ್ಮಯ ರೂಪವ ಹೊರಗೊಳಗೆ ಕಾಂಬುವರು ।
ಬಿನ್ನಣದಲಿ ಕೇಳಿ ಪ್ರಾಜ್ಞನೆ ಪ್ರತ್ಯಕ್ಷ ।
ಬಣ್ಣಬಣ್ಣವನು ತೋರುವ ತನ್ನಾಕಾರ ।
ಚಿನ್ನಗರ್ಭನಿಗೆ ಪ್ರತಿಬಿಂಬ ವೆನಿಸುವರು ।
ಭಿನ್ನಭಕ್ತರು ಕಾಣೋ ಯಿವರಿಂದಿತ್ತ ಸರ್ವರು ।
ಪನ್ನಗಗವತಾರ ನರ ಲಕ್ಷ್ಮಣ ಬಲರಾಮ ।
ಭಿನ್ನಾವೇಶ ವುಂಟು ಬಲನಲಿ ಸಂಕರು ।
ಷಣ್ಣನು ನರನಲ್ಲಿ ಹರಿವಾಯುಗಳುಂಟು ।
ಕಣ್ಣು ಮೂರುಳ್ಳವನ ಅವತಾರವನ್ನೆ ಕೇಳಿ ।
ಮುನ್ನೆ ಅಹಂಕೃತು ವೂರ್ಧ್ವಸಟ ಅಘೋರ ।

ರನ್ನ ಸದ್ಯೋಜಾತ ವಾಯು ಆವೇಶ ಪಾ |
ವನ್ನ ಶುಕಾಚಾರ್ಯ ಜೈಗೀಷವ್ಯ ದಿಗಂಬ |
ರನ್ನ ವ್ಯಾಧನು ವಾಮದೇವ ಸದಾಶಿವ |
ಉನ್ನತ ಮೂಲರೂಪದಲಿ ಯಿದ್ದಶಕ್ತಿ |
ಇನ್ನು ನೋಡಲಾಗಿ ಅವತಾರದಲಿ ಕಡಿಮೆ |
ಅನ್ನಿಮಿತ್ಯವಾಗಿ ಬರುವದಲ್ಲ ಪೂರ್ವ |
ಬನ್ನ ಬಡಿಸದಕೆ ಬರಲಾಗ ಮೂಲಬಲ |
ತನ್ನಿಂದ ತಾನೆ ಸ್ಮರಿಸಿದರೆ ಬಪ್ಪದು |
ಘನ್ನ ಸುಲಕ್ಷಣ ಯಿವರಿಗಿಪ್ಪತ್ತೆಂಟು |
ಗುಣ ತ್ರಯದಿಂದ ಮಹತತ್ವ ಮಹತತ್ವ |
ವನ್ನೆ ವಿಕಾರ ಮಾಡುವೆ ವೈಕಾರಿಕ ತೈಜಸ ಅಹಂ |
ಇನ್ನಿತು ಯೆರಡೊಂದಕೆ ಗರುಡಾಹಿ ರುದ್ರ ರೊಡೆಯರು |
ಅಣ್ಣೋರಣಿ ಮಹತ್ತು ರೂಪ ಯಿವರಿಗೆ ವುಂಟು |
ಸನ್ಮಾನಿಗಳ ವೊಡೆಯ ವಿಜಯ ವಿಠ್ಠಲ ರೇಯನ |
ಕಣ್ಣಲಿ ನೋಡುವರು ತಮ್ಮ ಯೆರಡು ಘಳಿಗೆ ॥ ೬ ॥

ಝಂಪಿ ತಾಳ

ವಾರುಣಿ ಸೌಪರ್ಣಿ ಪಾರ್ವತಿಗಳ ಬಿಡದೆ |
ಸಾರಿದ್ಯೈ ಪೊಂದೆ ಸಮವೆಂದು ತಿಳಿದು |
ವಾರುಣಿಗವತಾರ ಶ್ರೀ ರೇವತಿ ಮಹಾ |
ಈ ರೀತಿಯಲಿ ವುಂಟು ಸಿರಿ ಆವೇಶದಿಂದ |
ನೂರು ಗುಣಕೆ ನೀಚರು ತಮ್ಮ ಪತಿಗಳಿಗಿಂತ |
ಬಾರಿಬಾರಿಗೆ ಹರಿಯ ಗುಣರೂಪ ಕ್ರಿಯಗಳು |
ತೋರುವದು ಯಿವರಿಗೆ ಸಂಕೋಚಾಕಾರದಲ್ಲಿ |
ವಿಹಾರಲರಿಯರು ತಮ್ಮ ಪತಿಗಳಿತ್ತಲಿ ಅಹಂ |
ಕಾರಕೆ ಅಭಿಮಾನಿಗಳು ಯೆನಿಪರು |

ಪಾರುವತಿಗೆ ರೂಪಾಂತರವಿಲ್ಲ ಆಕೆ ।
ಸೇರಿಕೊಂಡಿಪ್ಪಳು ಪುತ್ರ್ಯಮರ ಪರ ದಿಂದ ।
ಭಾರತೀ ಅವತಾರ ಪಾಂಚಾಲಿಯು ಕಾಯದೊಳು ।
ವಾರಿಜಾಸನ ಸತಿಗೆ ಪ್ರತಿಬಿಂಬರೆನಿಸುವರು ।
ವಾರಿಜಾಂಡದ ಹೊರಗೆ ಅಂಶ ಅಂಶಗಳಿಂದ ।
ಪೂರವಾಗಿ ತುಂಬಿಕೊಂಡಿಪ್ಪರು ।
ಈ ರೀತಿ ಯುವತಿಗೆ ಪ್ರಂಬಾದವೇಳೆ ತ್ರಿಪು ।
ರಾರಿ ಮುಕ್ತದ ಜನರಿಗೆ ಸಿದ್ಧ ಪೂಃ ।
ಮೂರು ಮಂಬಿ ವ್ಯಾಪ್ತ ಮನ ತತ್ವಕೆ ಅಹಂ ।
ಕಾರದಲ್ಲಿಂವ ಹರಿಯ ನೋಳ್ಪರು ।
ಭಾರತಿ ಅನುಸರಿಸಿ ವೇದಾರ್ಥವನೆ ತಿಳಿದು ।
ನಾರಾಯಣನ ಮಹಿಮೆ ಸ್ತುತಿಸುವರು ।
ವಾರುಣಿಯಾಗಿ ಪುಟ್ಟುವ ಪಾರ್ವತಿ ದೇವಿ ।
ಸಾರಿಪ್ಪಳು ಶಿವನ ಅರ್ಧಾಂಗದಿ ।
ವಾರಾರಿಗಳು ಪುಳಿದ ಪುಕ್ತನ ಬಿಟ್ಟ್ವ ವೃ ।
ತ್ರ್ಯರಿ ಮುಕ್ಕವರ ಬುದ್ಧಿಗೆ ಕರ್ತರೂ ।
ಸಾರಿರ್ಪೆ ಅಜನಿಂದ ಯಿವರ ನಿಯುಂತ ಗುಣ ।
ಸಾರಿ ವಿಜಾತಿ ಸಜಾತಿ ಪುಟ್ಟು ।
ಭೂರಮಣ ವಿಜಯ ವಿಠ್ಠಲ ದೇಯನ ಧ್ಯಾನ ।
ವಿಚಾರದಲಿ ಮಾಡುವರು ತಮ್ಮ ಯೋಗ್ಯತೆವಾ । ॥ ೭ ॥

ತ್ರಿವಿಡ ತಾಳ

ಗಿರಿಸುತಾದಿ ಯಿವರ ಸತಿಗಳ ಮಧ್ಯದಲಿ ।
ಹರಿಯು ರಾಣಿಯರು ವರ್ಗದು ಮಂದೀ ।
ಕರಡಿಯಸುತೆ ನೀಲಾ ಭದ್ರಾ ಮಿತ್ರವಿಂದ ।
ತರಣಿನಂದನೆ ಕಾಳಿಂದಿ ಲಕ್ಷ್ಮಣ ಯಿವರ ।

ನಿರುತವ್ಯಾಪ್ತ ದರ್ಶಿಗಳು ಕಾಣೋ ವೊಂದೆ ಸಮ |
ಪರಮೇಷ್ಠಿ ತತ್ವದೊಳಗೆ ಕಿಂಚಿತು ಕಡಿಮೆ |
ಎರಡೊಂದು ತತ್ವಕೆ ಅಭಿಮಾನಿ ಗಳಾಗಿ |
ಪರಿಶೋಭಿಸುತಿಪ್ಪರು ಧ್ಯಾನ ಮಾಡುತಾ ಅಲ್ಲಿಯ |
ಪರಿಯಂತ ಕಾಂಬುವರು ಮುಂದಣ ತತ್ವಕೆ |
ಮರಳಿ ಸಲ್ಲದು ಕಾಣೋ ಪ್ರಾಣಾಸನ |
ಗರುಡಾದಿಗಳಿಗಿಂತ ಐದು ಗುಣ ಕಡಿಮೆ |
ವರಜಾಂಬವತಿ ಅಧಿಕಳು ಸ್ವಲ್ಪ |
ಸಿರಿ ದೇವಿಯಾವೇಶ ವಿಶೇಷ ಕಾಲದಲಿ |
ಬರಲು ಶೇಷನ ಸಮ ನೆಂದೆನಿಸುವಳು |
ಅರುಹುವೆ ವುಳಿದವರು ದವಾವೇಶ ಬಂದಾಗ |
ಉರಗೇಶಗಿಂತಲಿ ಲೇಶ ಕಡಿಮೆ |
ಹರಿಯ ಗುಣರೂಪ ಕ್ರೀಯ ಬಾಹುಳ್ಯ ಯಿ |
ವರಿಗೆ ಯಿಲ್ಲವೊ ಕಾಣೊ ಸತಿಗಿಂತಲಿ |
ಚರಿಯ ಸ್ವಲ್ಪಕಧಿಕ ಅವೆ ಅನಂತಾನಂತ |
ಸರಿಯಾಗಿ ವೊಪ್ಪುತಿಪ ನೋಳ್ಪುದಿ |
ಸರಸಿಜ ಜಾಂಡ ದೊಳಗೆ ಪುಟ್ಟಿದ ದ್ವಾರಕಾ |
ಪುರದಲ್ಲಿ ಮೆರೆದವರು ಕೃಷ್ಣನ ಕೂಡ |
ಚರಿತೆ ತಿಳಿವರಾರು ಅಂಶಿ ಅಂಶ ಗಳುಂಟು |
ಎರಡು ರೂಪಗಳೊಂದೆ ಐಕ್ಯವಾಗಿ |
ಇರಲಿಲ್ಲವೆ ನಿಲ್ಲದೆ ವಿಜಯ ನರ ನೋಡೆ |
ಪರಮಾಶ್ಚರ್ಯವಲ್ಲ ಮೃತ್ಯುಮರಿಗೆ |
ಧರಿಯಾರಂಭಿಸಿ ಕೊಂಡು ಬಿಡದೆ ಬೊಮ್ಮಾಂಡ ದಾ |
ಹೊರಗೊಳಗೆ ತಮ್ಮ ನಿಜತತ್ವವ |
ಬೆರಸಿ ಕೊಂಡಿಪ್ಪರು ಅವಾವರೂಪಗಳು |

ಧರಿಸಿ ಕೊಕ್ಕುತ್ತ ಹರಿಯ ಪೊಲಿಸುತ್ತಲಿ ।
ಸುರರಾದಿಗಳ ಪೊಡಿಯ ವಿಜಯ ವಿಠ್ಠಲ ರೇಯನ ।
ಸ್ಮರಣೆ ಕೀರ್ತನೆ ಶ್ರವಣ ಮಾಡುವರನು ದಿನಾ ॥ ೮ ॥

ಮಟ್ಟ ತಾಳ

ಇಂದ್ರ ಕಂದರ್ಪನು ಪೊಂದೆ ಸಮ ಯಿವರು ।
ಪೊಂದಿಪ್ಪರು ಮೇಲೆ ಮನ ತತ್ವದಲಿ ।
ಇಂದು ಮೌಳಿಯು ತತ್ವ ತನಕ ವ್ಯಾಪ್ತ ದರ್ಶಿಗಳು ।
ಸಂದಿಸದೆ ತಮ್ಮ ತತ್ವದಲ್ಲಿಗೆ ಧ್ಯಾನ ।
ಒಂದೊಂದು ಅಂಶಿಗಳ ಮಿಕ್ಕಾದ ತತ್ವದಲಿ ।
ನಿಂದಿವೆ ನೋಡಿ ಯೆಲ್ಲರಿಗೆ ವುಂಟು ।
ಮುಂದೆ ಬೊಮ್ಮಾಂಡ ದೊಳಗಿವರಿಗೆ ಅವತಾರ ।
ಛಂದದಿಂದಲಿ ತಿಳಿಯಬೇಕು ಜನರು ।
ಇಂದ್ರದೇವನೆ ಮಂದ್ರದ್ಯುಮ್ನನು ವಿಕುಕ್ಷಿ ಪು ।
ರಂದರ ಗಾಧಿ ವಾಲಿ ಕುಶಂ ಕುಂತಿಯು ।
ನಂದನ ಅರ್ಜುನ ಯಿಲ್ಲಿಗೆ ಆವೇಶ ಗೋ ।
ವಿಂದ ಸಮೀರ ನರನು ಸಿದ್ಧವೆನ್ನಿ ಮ ।
ತ್ತೊಂದು ರೂಪವೆ ವುಂಟು ಸವ್ಯವೆಂಬೊ ನಾಮಾ ।
ವೃಂದದೊಳಗೆ ಪುಟ್ಟಿತಿದಕೊ ।
ಇಂದಿರಾ ರಮಣನ್ನ ಗುಣ ರೂಪಕ್ರಿಯಾ ಮನ ।
ಬಂದಂತೆ ಯಿವರಿಗಿಲ್ಲ ವುಪಾಸ್ತಿಗೆ ।
ಐಂದ್ರ ರಾಣಿಯು ನೋಡೆ ನೂರು ಗುಣಕೆ ಕೊರತೆ ।
ಎಂದಿಗೆ ಚತುರ ವಿಂಶತಿ ಸುಲಕ್ಷಣಾ ।
ದಿಂದ ಪೊಪ್ಪುವರೈಯ್ಯ ಸ್ವರ್ಗ ಮಾನಿಗಳಾಗಿ ।
ಕುಂದವಳಿ ಅಸುರಾವೇಶ ಯಿಲ್ಲಿ ಯಿವರಿಗೆ ಅಕ್ಕು ।
ಸಂದೇಹ ವಿಡಕಿಲ್ಲ ಮೂಲದಲ್ಲಿದ್ದ ಸುಖ ।

ಸಂದೋಹ ಅವತಾರದಲಿ ಯಿಲ್ಲಾ ।
ತಂದೆ ಮಕ್ಕಳೆಂದೆನಿಸಿ ತಮಗೆ ತಾವೆ ಯಿಪ್ಪರು ।
ಒಂದೊಂದುಕಡೆ ಭಿನ್ನ ಜೀವದಲ್ಲಿ ಪುಟ್ಟುವರು ।
ಕಂದರ್ಪನವತಾರ ಯಿಂತಿವೆ ಲಾಲಿಸು ಮು ।
ಕುಂದನಲ್ಲಿ ಪುಟ್ಟಿದ ಪ್ರದ್ಯುಮ್ನ ಯಿದೆ ಆವೇಶ ।
ದಿಂದ ಪೊಪ್ಪುವ ಮತ್ತೆ ಸಾಂಬನಲ್ಲಿ ಲೋಕೇಶ ।
ಸ್ಕಂದ ಸನತ್ಕುಮಾರ ಭರತ ಸುದರುಶನ ।
ಸುಂದರ ನೆಂಬೊ ನಾಮ ಪತ್ಯೇಕ ಯಾತಗುಂಟು ।
ಅಂದ ದೊಳಗೆ ಬಲು ಅಂದ ಕಾಣೊ ।
ಚಂದ್ರಾ ವರ್ಣ ಸಿರಿ ವಿಜಯ ವಿಠ್ಠಲನಂಘ್ರಿ ।
ದ್ವಂದ್ವವ ಭಜಿಸುವರು ಪ್ರಾರಬ್ಧ ಭುಂಜಿಸುತ್ತ ॥ ೯ ॥

ಮಟ್ಟ ತಾಳ

ಮಹತ್ತಾಹಂಕಾರನು ತ್ವಗೇಂದ್ರಿಯಭಿಮಾನಿ ।
ನಿರುತ ವ್ಯಾಪ್ತ ದರ್ಶಿ ಮನಸಿನ ಪರಿಯಂತ ।
ಸರಸಿಜ ಗರ್ಭಾಂಡದ ಹೊರಗೆ ಯಿಪ್ಪನು ತನ್ನ ।
ಸ್ಥಿರತತ್ವ ತನಕ ಹರಿ ಮೂರ್ತಿಯಾ ಕಾಂಬಾ ।
ಪರಮ ಸಮಾಧಿಯಲಿ ಚಂಚಲ ವಿಲ್ಲದಲೆ ।
ಕರಣಂಗಳು ಯೆಲ್ಲ ಪೊಂದೆಸೆಯಲ್ಲಿಟ್ಟು ।
ತರತಮ್ಯ ಭಾವದಿಂದ ಗುಣ ರೂಪ ಕ್ರೀಯಾ ।
ಅರಿವನು ತನ್ನಯ ಯೋಗ್ಯತಾ ತಕ್ಕಷ್ಟು ।
ಎರಡೇಳು ನಾಲ್ವತ್ತು ಮರುತ ಮರುತರೊಳಗೆ ಗಣನೆ ।
ಸುರಪ ಕಾಮಗಿಂತ ಹತ್ತು ಗುಣಕೆ ನೀಚಾ ।
ಧರೆಯಲಿ ಯಾಪ್ರಾಣಿಗೆ ಅವತಾರವೆ ವುಂಟು ।
ಕರಸಿ ಕೊಂಬನು ಸರ್ವೋತ್ತುಂಗನೆಂಬೊ ನಾಮ ।
ಸರುವ ದಯಾಪರನು ವಿಜಯ ವಿಠ್ಠಲ ರೇಯಾ ।

ಶರಣರಿಗೆ ಸಂಚ ಪರಣನು ಅನುದಿನಾ | ॥ ೧೦ ॥

ರೂಪಕ ತಾಳ

ಅನಿರುದ್ಧ ರತಿದೇವಿ ಮನು ಸ್ವಾಯಂಭವ ಮಂತ್ರಿ |
ವನಜಾಸನ ಸಂಭೂತ ದಕ್ಷ ಪ್ರಜೇಶ್ವರ |
ಅನಿಮಿಷೇಶನ ರಾಣಿ ಶಚಿದೇವಿ ಯಿವರಾಗ |
ಜನ ಪೊಂದೆ ಸಮವೆನ್ನಿ ಯಿವರವತಾರ ವಿದೆನೊವು ಪ್ರದ್ಯುಮ್ನ |
ತನುಜನಾಗಿ ಪುಟ್ಟಿದ ಅನಿರುದ್ಧಾವೇಶದಲ್ಲಿ |
ಜನಪ ದಶರಥನಲ್ಲಿ ಶತೃಘ್ನ ಶಂಖಕೆ |
ಮನಸಿಗಭಿಮಾನಿ ಯಾಗಿಪ್ಪ ಚಕ್ರಾಗಿ |
ಮನುಮಥಸತಿ ರತಿ ಲಕ್ಷಣ ವೆಂ |
ದೆನಿಸಿಕೊಂಡಳು ಪೂರ್ವ ಸಿರಿಯಾವೇಶವ ತಾಳಿ |
ಮನು ತಾನೆ ಅಭಿಮಾನಿ ಪುಪಸ್ತೇಂದ್ರಿಯಕೆ |
ಎಣಿಸದಿರೀತಂಗೆ ಅವತಾರಂಗಳು ನೀವು |
ಅನಿಮಿಷ ಗುರುವಿನ ಅವತಾರಂಗಳು ತಾರಾ |
ವನಚರ ದ್ರೋಣ ವುದ್ಧವ ಆವೇಶಗಳಲ್ಲಿ |
ವನಜಸಂಭವ ವಾಯು ಯಿರ್ವರು ಪುಂಟು |
ಯೋಚನೆ ಸಲ್ಲ ಶಚಿದೇವಿ ಅವತಾರ ತಾರಾ ಅ |
ರ್ಜುನನ ಮಡದಿ ಚಿತ್ರಾಂಗದ ದೇವೇರು |
ಇನಿತಕ್ಕು ಹಸ್ತಾಭಿಮಾನಿ ದಕ್ಷಪ್ರಜೇಶ್ವರನು ಕಾಣೋ |
ಇವರೆಲ್ಲ ವ್ಯಾಪ್ತದರ್ಶಿಗಳು ಅ |
ಮನಸ್ತತ್ವ ಪರಿಯಂತ ಅ[illegible]ತ್ಮಲಿ ಯಿವರು |
ಘನವಾರಿತ್ರಿ[illegible] ಕಂಬು[illegible] [illegible] ಕು[illegible]ತು |
ಅನಿಲಾಹಂಕಾ[illegible]ನ್ನ ನೋಡಲ[illegible] ಗಿ [illegible] |
ಗುಣ[illegible] [illegible] [illegible] ಕೊಂಬ[illegible] ಲ |
ಕ್ಷ[illegible] ಅನಿರುದ್ಧಾದಿಗಳಿ[illegible] [illegible] |

ರನಿಗೆ ಮುಂದೆ ಪೇಳ್ವ ತಾತ್ವಿಕ ಜನರಿಗೆ ।
ಗುಣಿಸಿ ಯಿಪ್ಪತ್ತು ನಾಲ್ಕರತರುವಾಯ ಪೊಂ ।
ದನೆ ಕಡಿಮೆ ಏಂಪಶತಿ ಪರಿಯಂತ ।
ಗಣನೆ ಮಾಡುವದು ಸ್ಪಷ್ಟತ್ವದಲಿ ಭೇದ ।
ವನೆ ವುಂಟ ಯಿದರೊಳು ತರತಮ್ಯ ಭಾವದಲಿ ।
ಮನುಜರಿಗೆ ವಶವಲ್ಲ ನಿರ್ಧರ ಪೇಳ್ದಕ್ಕೆ ।
ವನಜ ಜಾಂಡದೊಳಗಿದ್ದ ಯಿವರ ರೂಪಾಂತರಕ್ಕೆ ।
ದನುಜಾವೇಶ ವುಂಟು ಹೊರಗೆ ಸಲ್ಲದು ಕಾಣೊ ।
ತೃಣ ಮೊದಲಾಗಿ ವ್ಯಾಪಿಸಿ ಕೊಂಡು ಯಿಪ್ಪರು ।
ಎಣಿಕೆ ಮಾಡಲರಿವೆ ಯಿವರ ಅಂಶಿ ಅಂಶಾ ।
ಗುಣಿಸಿದರಾನಂತಾನಂತ ವಾಗಿ ಯಿವೆ ।
ಅನಿರುದ್ಧಾದಿಯೊಳಗೆ ಶಬ್ದಾಭಿಮಾನಿ ಧಿ ।
ಷಣ ಕಾಣೊ ಯೆಂದೆಂದು ಯಿವರ ಮೂಲಕ ಯಿದ್ದ ।
ಮನನಾದಿ ವ್ಯಾಪಾರ ಕ್ರಮದಿಂದ ರೂಪಗಳಿ ।
ಗನಿತನಿತು ಕಡಿಮೆ ಅಜ್ಞಾನವಧಿಕಾಧಿಕವು ।
ಪ್ರಣವ ಮೂರುತಿ ನಮ್ಮ ವಿಜಯ ವಿಠ್ಠಲ ರೇಯನ ।
ನೆನಸುವರು ಯಿಾ ಪ್ರಕಾರದಲಿ ಬಿಡದೆ ಯೆನ್ನ ॥ ೧೧ ॥

ಝಂಪಿ ತಾಳ

ಭೌತಿಕಾನಾತಿಕ್ಕಾಗ್ನಿ ಮರೀಚಿ ಆತಿವಾಹಿಕಾ ।
ಈ ತ್ರಿವಿಧ ಪ್ರವಾಹ ವಾಯು ಯೆನಿಸಿ ಕೊಂಬಾ ।
ಭೂತಳ ದೊಳಗೆ ಅವತಾರಗಳು ಕಾಣೆ ಪ್ರ ।
ಖ್ಯಾತನಾಗಿ ಅಜನಾದಿ ಲೋಕಕೆ ನೈದಾ ।
ತಾ ತನ್ನ ನ್ಯಾಸದಿಂದಲಿ ಗಗನ ವರ್ಣಕೆ ।
ನೀತದಲಿ ವ್ಯಾಪ್ತ ದರಿ ಸತ್ಯಾ ।
ಜ್ಯೋತಿರ್ಮಯ ರೂಪ ಧರಿಸಿ ರಾತ್ರಿಯಲಿ ಖು ।

ದ್ಯೋತ ದಂದದಿ ಶಾಂಬ ಯಿದ್ದಸ್ಥಳದಿ ।
ಈತನೆ ಗುರ್ವಾದಿಗಳ ನೋಡಲು ಗುಣ ।
ಚಾತುರ್ಯ ಕಡಿಮೆ ಯಿವರಿಂದಲಿ ।
ಪಾತಕ ವಿಚಾರಣೆ ವಿವಸ್ವಾನ್ ಸೂರ್ಯನು ।
ಶೀತಾಂಶು ಶತರೂಪ ಸ್ವಾಯಂಭುವನ ರಾಣಿ ।
ಈತೆರದಿ ನಾಲ್ವರು ಗುಣದಲ್ಲಿ ಸಮವೆನ್ನು ।
ವಾತ ಪ್ರವಾಹನ್ನ ನೋಡಲಾಗಿ ಗು ।
ಣಾತಿಶಯವಿಲ್ಲ ವೊಂದೆರಡರಿಂದಲಿ ಕಡಿಮೆ ।
ಮಾತು ಲಾಲಿಸಿ ಧರ್ಮನವತಾರ ಜಾಂಬವಾನ್ ।
ವಾತಾವೇಶವುಳ್ಳ ಕುಂತಿತನುಜ ವೊದ ।
ಲಾತಗೆ ಆವೇಶ ಬ್ರಹ್ಮನ ಪೇಳಲಿ ಬೇಕು ।
ಆ ತೊತ್ತಿನಲಿ ಪುಟ್ಟಿದ ವಿದುರ ಸತ್ಯಜಿತು ।
ಪುರುಹೂತನ್ನ ಪಟ್ಟಕೆ ಚತುರ್ದಶರೊಳು ।
ಸೀತಾಕರನು ಅಂಗದನಾದ ಕಪಿಯೆನಿಸಿ ।
ಧಾತನಾವೇಶದಲಿ ಸುಗ್ರೀವ ಹರಿಯಿಂದ ।
ಸೂತ ಸುತನೆನಿಸಿದ ಕರ್ಣನಾಗಿ ।
ಈತನಲಿ ಆವೇಶ ಸಹಸ್ರ ವರ್ಮನೆಂಬೀ ।
ದೈತೇಯ ವುಂಟು ಮುನ್ನಿನ ಜನುಮದಿ ।
ಘಾತನ್ನ ಕೊಲ್ಲಿಸಿದ ನಿಮಿತ್ಯ ವಿದು ಸಿದ್ಧ ।
ಪಾತಕದವರನ್ನ ಕೂಡಿಕೊಂಡ ।
ದ್ವೈತ ಅವತಾರಗಳು ಸೂರ್ಯ ದೇವರವೆನ್ನಿ ।
ನೀಚನನುಭೋಗದಿಂದ ತಿರಿಗಿದಳು ।
ಅಂತರಿಕ್ಷದಿಂದ ಬಂದು ।
ಭೂತಳವೊಳಗೆ ಚಿತ್ರಾಂಗದಾ (ನಾ) ।
ಶ್ವೇತಾಶ್ವನನ ನೆರದು ಮರಳಿ ಅಂಶದಲಿ ನಿಜ ।

ಗಾತುರವ ಕೂಡಿದಳು ಕರ್ಮ ನೀಗಿ ।
ಪ್ರೀತಿಯಿಂದಲಿ ಹಿಂದೆ ಪೇಳಿದಂತೆ ಕ್ರ ।
ಮಾತು ತಿಳಿವದು ವ್ಯಾಪ್ತಿ ಬಿಂಬ ಧ್ಯಾನಾ ।
ಅತುಮಂತರಾತ್ಮ ವಿಜಯ ವಿಠ್ಠಲ ರೇಯನ ।
ದೂತರಾಗಿ ಸರ್ವರಲ್ಲಿ ಸುಖಿಸುವರು ॥ ೧೨ ॥

ಮಟ್ಟ ತಾಳ

ವರುಣ ದೇವರ ತುಳಸಿ ಮಂಡೂಕ ಸುರೇಣಾ ।
ತರುಚರಾವೇಶದಲಿ ಪೊಳವುತ ಬಲದಲ್ಲಿ ।
ಇರುತಿಪ್ಪನು ಮತ್ತೆ ಮಹಾಭಿಷಕ್ ಶಾಂತನು ।
ಧರೆಯೊಳಗೀತೆರದಿ ಅವತಾರಂಗಳು ಪುಂಟು ।
ತರಣಿ ಚಂದ್ರರಿಗಿಂತ ಪೊಂದರ್ಧ ಗುಣಕೆ ।
ಕೊರತಿ ಯೆನಿಸಿಕೊಂಬ ಅಗ್ನಿತತ್ವಕೆ ವ್ಯಾಪ್ತ ।
ದರತಿ ತನ್ನಯ ತತ್ವ ಪರಿಯಂತ ಧ್ಯಾನದಲಿ ।
ನಿರಿಕ್ಷಿಸುವನು ಹರಿಯ ಮೂರ್ತಿಯ ಜನ್ಮಾಗಿ ।
ಸುರಮುನಿ ನಾರದನು ಅಲ್ಪನಹ ಮು ।
ವರುಣಗಿಂದಲಿ ಕೇಳಿ ತತ್ಪ್ರಕಾರವನೆ ।
ಪರಮೇಷ್ಠಿ ಕಲ್ಪದಲಿ ಸೂದರ ಯೋನಿಯಲಿ ಜನಿಸಿದನು ಕಾಣೋ ।
ಮರುತ ಬಾಂಧವ ಮುಖ್ಯ ಅನಲ ಪ್ರಸೂತಿ ಭೃಗು ।
ಎರಡೊಂದು ಜನರು ಸಮರೆನ್ನಿ ಗುಣದಲ್ಲಿ ।
ಸುರಮೊಗನವತಾರ ಲವ ನೀಲ ದ್ರುಪದನ್ನ ।
ವರ ಪುತ್ರನು ದ್ರುಷ್ಟದ್ಯುಮ್ನ ನೆಂಬುವನಾದ ।
ನಿರುತ ಪ್ರಸೂತಿಗೆ ಅವತಾರವೆ ಯಿಲ್ಲಾ ।
ಜರನೆಂಬೊ ನಾಮದಲಿ ಜನಸಿದಾ ಭೃಗುಮೌನಿ ।
ಶಿರದ್ವಯ ತೇಜಕ್ಕೆ ಅಭಿಮಾನಿ ಬ್ರಾ ।
ಹ್ಮರ ಜಾತಿಗೆ ಭೃಗುಮುನಿ ಅಧಿಪತಿ ಕಾಣೋ ।

ವರುಣಗಿಂತಲಿ ಮುಪ್ಪಾದ ಗುಣವೆ ಕಡಿಮೆ ।
ಕರಣ ಶುದ್ಧಿ ಹರಿಯು ಗುಣ ಕ್ರೀಯರೂಪಗಳು ।
ಸ್ಮರಿಸುವರು ಕೆಲವು ಧ್ಯಾನ ಮಾಳ್ಪರು ।
ಮರಿಯದೆ ವೃಷಸಂಹಾರಣೆಯನ್ನು ಮಾಡಿ ।
ತುರಿ(ದಿ)ಯಲ್ಲಿ ಕ್ರಮದಿಂದಲಿ ಬಹುಗುಣ ವುಪಾಸಕರು ।
ಪರವರಪರಿಪೂರ್ಣ ವಿಜಯ ವಿಠ್ಠಲ ರೇಯು ।
ಪೊರೆಯುತಿಪ್ಪನು ಸದಾ ಮುಕ್ತಿಯೋಗ್ಯರ ಬಿಡದೆ ॥ ೧೩ ॥

ತ್ರಿವಿಡಿ ತಾಳ

ಮನು ವೈವಸ್ವತ ವಿಶ್ವಾಮಿತ್ರ ಮರಿಚ್ಯಾದಿ ।
ಜನರೇಳು ಪೊಂದೆಸಮ ಗುಣಗಳಲಿ ।
ಇನಿತರೊಳು ಕೌಸಿಕ ಪಿತರರಿಗೆ ಆಚಾರ್ಯ ।
ಎನಿಸಿ ಕೊಂಬನು ನೋಡಿ ತಪ್ಪೊವಿತ್ತನು ।
ಅನಲಾದಿಗಳಿಗಿಂತ ಅವಸ್ಥ್ಯಾದರು ಯೆರಡು ।
ಗುಣ ಧಿಂದ ಕಡಿಮೆ ನಿಶ್ಚಯವೆನ್ನಿರೋ ।
ಇನನಲ್ಲಿ ಮಿತ್ರನು ತಾರಾ ಮನ.ಜ ಪಾ ।
ಹನ ಪ್ರಾವಹಿಗಳು ವಂದೆ ಸಮರೂ ।
ವನಜಾಪ್ತನವತಾರ ಭೀಷ್ಮಕ ರಾಯರು ।
ಗ್ಮಿಣಿಗೆ ತಂದೆ ಯಾದಾ ವಾ ವಿನಿಂದ ।
ಅನಿಮಿಷ ಗುರುವಿನ ಸತಿ ತಾರೆ ಯಾದಳು ।
ದನ.ಜಾ ಧುಮುರ್ಖ ಕಪಿ ಹೈಡಿಂಬನು ।
ಎನಿಸಿದ ರುದ್ರಾವಿಷ್ಟಾನಾಗಿ ಪ್ರಾವಹಿ ।
ಅನಿಸಲಿಲ್ಲವೊ ಅವತಾರದಲ್ಲಿ ।
ದನುಜ ಕೋಣಾಧಿಪ ಅಧರ್ಮ ಮಿತ್ರ ಸೂ ।
ಯರ್ನನು ಪಾಯ್ವೇಂದ್ರಿಗೆ ಅಭಿಮಾನ್ಯರಲಿ ।
ಗುಣ ವ್ಯಾಪ್ತ ದರ್ಶತ್ವ ವುಪಾಸನ ಯೆಲ್ಲ ವ ।

ಖ್ಯಾಣಿಸುವೆ ವೃಕ್ಷ ಶೇಷರ ಭಾಗಕೆ ।
ಧನಪ ವಿಷ್ವಕ್ಸೇನ ಅಶ್ವಿನಿ ದೇವತೆ ।
ಗಣಪತಿ ಯಿವರೊಂದೆ ಸವರು ನಿತ್ಯಾ ।
ಧನಪನ್ನ ಅವತಾರ ರಥ್ನಾ ಭಗದತ್ತನು ।
ಫಣಿಭೂಷಣನ ಆವೇಶಕಾಣೋ ।
ಅನಿಮಿಷ ವೈದ್ಯರು ವಿವಿಧ ವ್ಯಂದ ಕುಂತಿ ।
ತನುಜರೊಳಗೆ ನಕುಲ ಸಹದೇವನು ।
ಗಣಪತಿ ಜಾಂಬವೇಷ್ಟನು ನಭ ಘ್ರಾಣಕೆ ಅ ।
ಪ್ಪಿಸಿದೇವರಧಿಪತಿ ನಿಜವೆನ್ನಿರೋ ।
ಮನಿ ಯಿಂದೊಂಪಸಿ ಕೊಂಡಾ ವಿಜಯ ವಿಠ್ಠಲ ರೇಯು ।
ನೆನಸಿದ ಜನರಿಗೆ ಜನುಮ ಬರಲೀಸಾ । ॥ ೧೪ ॥

## ಧ್ರುವ ತಾಳ

ಇತ್ತಲಿತ್ತಲು ಕೇಳಿ ರತಸ್ಥ ಜನರನ್ನು ।
ತುತಿಸುವೆನು ಬಿಡದೆ ಮನಸಿನಲ್ಲಿ ।
ಮತ್ತೆ ಮರುತ್ತಗಳು ಯೆಣಿಸಿ ವಂ ।
ಭತ್ತು ನಾಲ್ವದೊಂದು ಯೇಕಾದಶ ರುದ್ರರನ್ನು ।
ಸುತ್ತುವರನ್ನು ದ್ವಾದಶ ವಿಶ್ವದೇವತೆಗಳ ।
ಹತ್ತು ವೈದ್ಯರಿಬ್ಬರು ದ್ಯಾವಾ ಪೃಥ್ವಿ ।
ಪಿತ್ರರು ಮೂರು ಮಂದಿ ಋಭುಗಣವು ಬೃಹ ।
ಸ್ಪತ್ಯಾಚಾರ್ಯರು ಸಹಿತಸಂಖ್ಯೆಮಾಡೆ ।
ತತ್ತಿಸುವ ಅಗ್ನಿ ಯೆಂಟು ಜನರುಕೂಡಿ ।
ಹತ್ತು ಹತ್ತು ಮಂದಿ ಸಿದ್ಧವಯ್ಯಾ ।
ಉತ್ತುಮರಿದರೊಳು ಚತುರ್ದಶರೆನ್ನಿ ಭಾ ।
ರತಿ ರಮಣ ಪ್ರಾಣ ಆತಿವಾಹಿಕಾ ।
ಹತ್ತೈದು ಮರುತರಲ್ಲಿ ಯಿವರು ರುದ್ರರೊಳಗೆ ।

ಕೃತ್ತಿವಾಸನು ವಸುಗಳೊಗೆ ಅಗ್ನಿ ।
ಕತ್ತಲೆ ಹರರ ಮಧ್ಯ ವುರುಕ್ರಮ ಭಗವಂತ ।
ವಿತ್ತ ಮರ್ದನ ವಿವಸ್ವನ್‌ಯಾದ ಸಂ ।
ಮಿತ್ರನ್ನ ಸಹವಾಗಿ ಐದುಮಂದಿ ಬ್ರಹ ।
ಸ್ಪತ್ಯಾಚಾರ್ಯರು ಪಿತೃ ಮೂರು ಮಂದಿ ಯಿ ।
ನಿತ್ಯ ಪೇಳಿದೆ ನೋಡಿ ವುಳಿದವರು ಎಂ ।
ಭತ್ತು ಐದು ಜನರು ಸಾವ್ಯುರಯ್ಯ ।
ಸತ್ಯವೆಸರಿ ಪರ್ಜನ್ಯನ ಕೂಡಿಸೆ ಅ ।
ಗುತ್ತ ಯಿಪ್ಪದು ಶತಸ್ಥರ ಗಣಸೆ ।
ಇತ್ತಂದ ಕೂಡಿಸಲು ವುಕ್ತರ ಕಳೆದು ಎಂ ।
ಭತ್ತೈದು ಮಂದಿ ಧನಪ ವಿಘ್ನೇಶ್ವರ ।
ಹತ್ತುರೊಳೊಂದು ಕೆಡಿಮೆ ದೇವತೆಗಳ ಸಹಾ ।
ಮಿತ್ರಗಿಂತಲಿ ತರುವಾಯದವರು ।
ಉತ್ತಮ ರಿವರೊಳಗೆ ಪ್ರಾಣಾದಿಗಳು ಕಿಂ ।
ಚಿತ್ತು ಯೆಂದೆನಿಸುವರು ಸರ್ವಕಾಲಾ ।
ಉಕ್ತರೊಳಗೆ ವೊಬ್ಬ ಪರ್ಜನ್ಯನೆಂಬೊ ಅ ।
ದಿತ್ಯನು ಭಾಗೀರಥಿ ಸಮ ಕಾಣಿರೋ ।
ಇತ್ತ ಶೇಷ ಜನರ ಅವತಾರಾದಿ ಮಹಿಮೆಯ ।
ವಿಸ್ತರಿಸುವೆನು ನಾ ತೋರಿದನಿತು ।
ಚಿತ್ತಾಭಿ ಮಾನಿ ಜನಕ ವಿಜಯ ವಿಠ್ಠಲ ರೇಯನ ।
ತುತ್ತಿಸಿ ಮುಂದಣಾಗಮವನ್ನು ಪೇಳುವೆ । ॥ ೧೫ ॥

ಈ ಸುಳಾದಿಯು ಅರ್ಥ ಸಿಕ್ಕಿದೆ ಕಾರಣ ಮುಂದೆ ಶ್ರೀ ಜನ್ನಾಥ ದಾಸರು ಮಾಡಿದ ಬೃಹತ್ತಾರತಮ್ಯ ಪದ ಕೊಡಲಾಗಿದೆ

೧೭ ನೆಯ ಸುಳಾದಿಯ ಕಠಿಣ ಶಬ್ದಾರ್ಥ

ರಿಪುಭೈರವ - ವೈರಿ ಭಯಂಕರ. ದುರ್ಧರ್ಷ - ಅಸಾಧ್ಯ.

ಅವಿಸ್ಮೃತ ದಾತಾ - ಮೋಕ್ಷ ದಾತಾ   ಅಜಾತಃ - ಜನನರಹಿತ
ಆಮ್ರಯ - ರೋಗ   ಸವ್ಯಾತ್ರ - ಚರ್ಮ ( ಸವಾ )
ತ್ಯಕ್ತವೈದಿಕರು - ವೇದದಲ್ಲಿ ಹೇಳಿದ್ದನ್ನು ತಿಳಿಯದವರು
ಧಿಷಣ - ಬೃಹಸ್ಪತಿ

ಶ್ರೀ ಜಗನ್ನಾಥ ವಿಠ್ಠಲ ವಿರಚಿತ

## (೧೮) ಅವತಾರ ಆವೇಶ ಬೃಹತ್ತಾರತಮ್ಯ

**ಪದ ರಾಗ ವಸಂತ ಭೈರವಿ ಝಂಪೆ ತಾಳ**

ಆನಮಿಪೆ ವಿಷ್ಣು ಶ್ರೀ ಬ್ರಹ್ಮವಾಯು |
ವಾಣಿ ಭಾರತಿ ಮುಖ್ಯರವತಾರ ಆವೇಶ ಕಾನಮಿಪೆ ||ಪಲ್ಲ||
ಶ್ರೀಮತ್ಸ್ಯ ಕೂರ್ಮ ಭೂ ವರಹ ನರಸಿಂಹ ದಧಿ |
ವಾಮನ ತ್ರಿವಿಕ್ರಮ ಭೃಗು ಕುಲೋದ್ಭವ |
ರಾಮ ಯಾದವ ಕೃಷ್ಣ ಬುದ್ಧ ಕಲ್ಕಿ ಹಯಾಸ್ಯ |
ನಾಮ ತಾಪಸಮನು ವೃಷೇಂದ್ರ ಅಜಿತಾದಿಗಳಿಗಾನಮಿಪೆ |೧|
ವಾಸುದೇವಾಚ್ಯುತಾನಂತ ಗೋವಿಂದ ಮಹಿ |
ದಾಸ ಧನ್ವಂತ್ರಿ ಹರಿ ಹಂಸ ದತ್ತಾ |
ವ್ಯಾಸ ಕಪಿಲಾತ್ಮಾಂತರಾತ್ಮ ಪರಮಾತ್ಮ ಯ |
ಜ್ಞೇಶ ವೈಕುಂಠ ನಾರಾಯಣಾದ್ಯವತಾರ ಕಾನಮಿಪೆ ||೨||
ನಾರಾಯಣೀ ಋಷಭ ಐತರೇಯ ಶಿಂಶು |
ಮಾರ ಯಜ್ಞ ಪ್ರಾಜ್ಞ ಸಂಕರುಷಣಾ ||
ಕ್ಷೀರಾಬ್ಧಿ ನಿಲಯ ಯದುನಂದನಾ ಕೃಷ್ಣ ಹರಿ |
ನಾರಾಯಣಾ ಧರ್ಮ ಸೇತು ರೂಪಾದಿಗಳಿಗಾನಮಿಪೆ | ||೩||
ಗುಣಗಳಭಿಮಾನಿ ಶ್ರೀ ಭೂ ದುರ್ಗ ದಕ್ಷಿಣಾಂ |
ಭೃಣಿ ಮಹಾಲಕ್ಷ್ಮಿ ಶ್ರೀ ವಿಷ್ಣು ಪತ್ನೀ ||

ಜನನಿಮಾಯಾ ಜಯ ಕೃತಿ ಶಾಂತಿ ಶುದ್ಧ ರು |
ಗ್ಮಿಣಿ ಸತ್ಯ ಸೀತಾದ್ಯಮಿತ ರೂಪಗಳಿಗಾನಮಿಪೆ ‖ ೪ ‖
ಹೀನಳೆನಿಸುವಳನಂತಾಂಶದಲಿ ಸುಖ ಬಲ |
ಜ್ಞಾನಾದಿ ಗುಣದಿ ಮಹಲಕ್ಷ್ಮಿ ಹರಿಗೆ |
ಆನಂದ ವಿಜ್ಞಾನಮಯನ ವಕ್ಷಸ್ಥಳವೆ |
ಸ್ಥಾನ ವಾಗಿಹದು ಇಂದಿರೆಗೆ ಆವಾಗ | ೫ |
ಪುರುಷ ನಾಮಕ ವಿಧಿ ವಿರಿಂಚಿ ಮುಖನ್ ಬ್ರಹ್ಮ |
ಸುರುಚಿ ಮುಖ್ಯ ಪ್ರಾಣ ಸೂತ್ರ ಸ್ಮೃತೀ |
ಗುರು ಮಹಾಪ್ರಭು ಋಜುಸಮಾನ ವಿಜ್ಞಪ್ರಾಜ್ಞ |
ಹರಿಭಕ್ತಿ ಮೇಧಾವಿ ಮುಕ್ತಿಧೃತಿ ಅಮೃತನಿಗೆ | ೬ |
ಸ್ಥಿತಿ ಯೋಗ ವೈರಾಗ್ಯ |
ಚಿಂತ್ಯ ಬಲ ಸುಖ ಬುದ್ಧಿ |
ವಿತತಾದಿಗೋಪ ಹನುಮ ಭೀಮ ‖
ವೃಷಿವರಾನಂದಮುನಿ ಮೊದಲಾದ ರೂಪ ಶ್ರೀ |
ಪತಿಗಧಿಷ್ಠಾನ ಕೋಟಿಗುಣಾಧಮರು ರಮೆಗೆ | ಆನಮಿಪೆ | ೭ |
ಸರಸ್ವತೀ ಗಾಯತ್ರಿ ಬುದ್ಧಿ ವಿದ್ಯಾ ಪ್ರೀತಿ |
ಗುರುಭಕ್ತಿ ಸರ್ವ ವೇದಾತ್ಮಕ ಭುಜಿ |
ಪರಮಾನುಭೂತಿ ಸಾವಿತ್ರಿ ಸುಸುಖಾತ್ಮಿಕಾ |
ಪರಮೇಷ್ಠಿಪತ್ನಿ ನಾಮಗಳೆವೆಂದರಿದು | ೮ |
ಶಿವಕನ್ಯ ಯಿಂದ್ರಸೇನಾ ಕಾಶಿಜಾ ಚಂದ್ರ |
ಯುವತಿ ದ್ರೌಪದಿಯು ಭಾರತಿರೂಪವೂ |
ಪವಮಾನ ಬ್ರಹ್ಮರಿಗೆ ಶತಗುಣಾಧಮ ಸದಾ |
ಶಿವನ ರೂಪಗಳ ಯಿಪರಿಯ ಚಿಂತಿಸುತ | ೯ |
ತತ್ಪುಮಾನೂರ್ಧ್ವಪಟ ದುರ್ವಾಸ ವ್ಯಾಧ ಅ |
ಶ್ವತ್ಥಾಮ ಜೈಗೀಷವ್ಯ ಶಪ ಅಹಂಕೃತು |

ನಿತ್ಯವಾಯಿಪ್ಪಷ್ಟ ಶುಕ ವಾಮದೇವ ಗುರು |
ಮೃತ್ಯುಂಜಯಶರ್ವ ಸದ್ಯೋಜಾತ ತತ್ಪುರುಷ ಗಾನವಿಪೆ ||೧೦||
ನರನಾಮಕ ಶುಕ್ಲಕೇಶಾವೇಶ ಬಲಿಗೆ ಸಂ |
ಕರುಷಣಾವೇಶ ಲಕ್ಷ್ಮಣ ದೇವಗೆ ||
ಗರುಡ ಶೇಷಘೋರ ಸಮರು ಶತಗುಣದಿಂದ |
ಕೊರತೆ ಯೆನಿಸುವರು ಮೂವರು ವಾಣಿ ದೇವಿಗೆ | ||೧೧
ಶೇಷಗೆ ಸಮಾನ ನೆನಿಪಳು ಜಾಂಬವತಿ ರಮಾ
ವೇಶಕಾಲದಿ ಷಣ್ಮಹಿಷಿಯರ ಪೊಳಗೆ |
ಹ್ರಾಸ ಕಾಲದಿ ಸಮಳು ಐವರಿಗೆ ಜಾಂಬವತಿ |
ವೀಶಾದ್ಯರಿಗೆ ಹರಿಸ್ತ್ರೀಯು ಶಥಮರ್ತ್ಯದು ಗುಣ ||೧೨||
ರೇವತಿ ಶ್ರೀಯುತ ಶ್ರೀಪೇಯು ರೂಪತ್ರ |
ಯಾವಕಾಲದಿ ವಾರುಣಿಗೆ ಪಾರ್ವತೀ ||
ದೇವಿ ಸೌಪರಣಿಗೆಸಮ ಷಣ್ಮಹಿಷಿಯರಿಗೆಪಡು |
ಮೂವರಿರ್ಪ್ಪದು ಗುಣ ಕಡಿಮೆ ಪತಿಗಳಿಗೆ ||೧೩||
ಕುಶ ವಾಲಿ ಗಾಧಿ ಮಂದ್ರದ್ಯುಮ್ನನು ವಿಕುಕ್ಷಿ |
ಶ್ವಸನ ಹರಿ ಶೇಷ ಸಂಯುಕ್ತಾರ್ಜುನಾ ||
ಅಶನೀಧರನ ಸ್ವರೂಪಂಗಳವು ಮನ್ಮಥನ |
ಪೆಸರು ಪೇಳುವೆನು ಅವತಾರಗಳ ನಿತ್ಯ ||೧೪||
ಪ್ರದ್ಯುಮ್ನ ಸಂಯುಕ್ತ ರುಗ್ಮಿಣೀದೇವಿ ಸುತ |
ಪ್ರದ್ಯುಮ್ನ ಭರತನು ಸನತ್ಕುಮಾರಾ ||
ಪದ್ಮಜಾವಿಷ್ಟ ಸಾಂಬ ಸ್ಕಂದ ಸುದರಶನ |
ರುದ್ರನರ್ಧಾಂಗಿನಿಗೆ ದಶಗುಣಾಧಮರೆಂದು ||೧೫||
ಕಾಮೇಂದ್ರರಿಗೆ ದಶಾಧಮ ಅಹಂಭವ ಪ್ರಾಣ |
ನಾಮಕಗೆ ರೂಪ ಸರ್ವೋತ್ತುಂಗನು |
ಕಾಮಪುತ್ರಾನಿರುದಾದ್ಧಾಧಿಗಳು ದಶ ಹೀನ |

ಈ ಮಹತ್ಮರ ದಿವ್ಯ ಅವತಾರ ರೂಪಗಳಿಗಾನವಿಪೆ ||೧೬||
ತಾರ ನಾಮಕಪ್ಲವಗ ಬ್ರಹ್ಮಾಂಶಯುಗೆಂದ್ರಿಣ |
ಮಾರುತಾವೇಶ ಸಂಯುತ ವೃದ್ಧವಾ ||
ಮೂರು ರೂಪವು ಬೃಹಸ್ಪತಿಗೆ ಪ್ರದ್ಯುಮ್ನನ ಕು |
ಮಾರಾನಿರುದ್ಧ ಕೃಷ್ಣ ಅನಿರುದ್ಧನಿಗೆ ||೧೭||
ತಾರ ಚಿತ್ರಾಂಗದ ಶಚಿ ರೂಪ ಲಕ್ಷಣ |
ಈ ರುಗ್ಮವತಿ ಯೆರಡು ರತಿರೂಪವು |
ಆರು ಜನ ದಕ್ಷ ಸ್ವಯಂಭುವ ಮನು ಪ್ರಾಣ |
ಗೀರ್ಯೆದು ಗುಣಗಳಿಂದಧಮ ರೆಂದರಿದು ||೧೮||
ಭೂತಾಭಿಮಾನಿ ಪ್ರವಹ ಪಂಚಗುಣದಿ ಪುರು |
ಹೂತ ಪತ್ನ್ಯಾದಿಗಳಿಗಧಮ ನೆನಿಪಾ |
ಈತಗವತಾರ ಎಲ್ಲವನಿಯೊಳು ಚಂದ್ರ ಪ್ರ |
ದ್ಯೋತನಾಂತಕ ಸ್ವಯಂಭುವ ಪತ್ನಿ ಶತರೂಪಿ ||೧೯||
ಸತ್ಯಜಿತು ಜಾಂಬುವಾನ್ ವಿದುರ ಗರು ವಾಯು ಸಂ |
ಯುಕ್ತ ಧರ್ಮರಾಜ ಯಮಗೆ ರೂಪ ನಾಲ್ಕು ||
ರಾತ್ರಿಚರನವತಾರ ಯಿಂದ್ರ ಯುಕ್ತಾಂಗದಾ |
ದಿತ್ಯ ನವತಾರ ಬ್ರಹ್ಮಾವಿಷ್ಟ ಸುಗ್ರೀವ ||೨೦||
ಹರಿ ಯುಕ್ತ ಕರ್ಣ ಮನುಪತ್ನಿ ಶತರೂಪ ನಾ |
ಲ್ವರು ಸಮರು ಪ್ರವಹಗಿಂದೆರಡು ಗುಣದೀ ||
ಕೊರತಿ ಮಹಭಿಷಕು ಮಂಡೂಕ ಶಂತನು ಸುಶೇ |
ಣ್ವರುಣ ರೂಪಗಳಧಮ ಪಾದ ಪಾದಾರ್ಧ ಕಾನವಿಪೆ ||೨೧||
ನಾರದಾಧಮ ವರುಣಗಿಂತಗ್ನಿ ಅವ |
ತಾರ ದೃಷ್ಟದ್ಯುಮ್ನ ಲವ ನೀಲರೂ |
ಮೂರು ಭೃಗುರೂಪ ಜರನೆಂಬ ವ್ಯಾಧ ಪ್ರಸೂತಿ |
ನಾರಿನಿಧಿಗಿಂಧ ಪಾದ ಗುಣದಾಧಮರು ಯೆಂದು ||೨೨||

ಅಂಗೀರ ಪುಲಸ್ತ್ಯಾತ್ರಿ ಪುಲಹನು ಮರೀಚಿ ಮುನಿ ।
ಪುಂಗವ ವಶಿಷ್ಟ ಕೃತು ಬ್ರಹ್ಮ ಸುತರೂ ।
ತುಂಗ ವಿಶ್ವಾಮಿತ್ರ ವೈವಸ್ವತರು ಸದಾ ।
ಕೆಂಗದಿರಗಧಮ ರೊಂಭತ್ತು ಜನರೆಂದು ॥ ೨೩ ॥
ಸಪ್ತ ಋಷಿಗಳಿಗೆ ಸಮನೆನಿಪ ವೈವಸ್ವತನು ।
ಸಪ್ತವಾಹನನ ಆವೇಶ ಬಲದೀ ।
ಲುಪ್ತವಾಗಲು ಕಡಿಮೆ ಯೆನಿಪ ಪ್ರಾವಹಿ ತಾರ ।
ಕ್ಲಪ್ತ ವೊಂದೇ ರೂಪ ಕೃಪೆಯೆಂದು ಕರೆಸುವಳಿಗಾನಮಿಪೆ ॥ ೨೪ ॥
ಹರನಂಶಯುತ ಘಟೋತ್ಕಚ ದುರ್ಮುಖನು ।
ನಿಋರತಿ ಕರಸುವನು ರಾಹು ಯುಗ್ಭೀಷ್ಮಕ ನೃಪಾ ।
ನೆರೆ ಮಿತ್ರನಾಮಕನ ರೂಪ ನಾಲ್ವರು ಅಗ್ನಿ ।
ಗೆರಡು ಗುಣದಿಂಧಮರೆನಿಪರೆಂದೆಂದು ॥ ೨೫ ॥
ಮಾರಾರಿ ಯುಕ್ತ ಭಗದತ್ತ ಕಥ್ಥನ ಯಿಾ ।
ಕುಬೇರಗೆರಡವತಾರ ವಿಘ್ನೇಶಗೆ ।
ಚಾರುದೇಷ್ಣನು ವೊಂದೆ ಯಿಂದ್ರ ಸಾವೇಶ ಯುತ ।
ಆರು ರೂಪಗಳುಳ್ಳ ನಾಸತ್ಯ ದಸ್ರಂಗೆ ॥ ೨೬ ॥
ವಿವಿದ ವೈಂದ ತ್ರಿಸಿಖ ನಕುಲ ಸಹದೇವ ವಿಭು ।
ಅವತಾರ ಅಶ್ವಿನೀದೇವತೆಗಳ ॥
ಲವಣಾದಿ ಷಡ್ರಸಗಳೊಳಿದ್ದು ಜೀವರಿಗೆ ।
ವಿವಿಧ ಭೋಗ ಗಳಿತ್ತು ಸಂತೈಸರೆಂದೆಂದು ॥ ೨೭ ॥
ದ್ರೋಣಾರ್ಕ ದೋಷಾಗ್ನಿ ಧ್ರುವ ವಿಭಾವಸು ವಸ್ತು ।
ಪ್ರಾಣಾಷ್ಟ ವಸುಗಳೊಳಗೆ ದ್ಯುನಾಮಕಾ ॥
ವಾಣೀಶ ಯುಕ್ತ ಭೀಷ್ಮನು ನಂದ ಗೋಪಾಲ ।
ದ್ರೋಣ ನಾಮಕ ಪ್ರಧಾನಾಗ್ನಿಗಿಂದಧಮರೆಂದಾನಮಿಪೆ ॥ ೨೮ ॥
ಭೀಮ ರೈವತ ವೊಜೈಕಪಾದ ಹಿರ್ಬುದ್ನಿ ಭವ ।

ವಾಮ ಬಹುರೂಪೋಗ್ರಜ ವೃಷಾಕಪಿ ||
ಈ ಮಹನ್ನೆಂಬ ಹನ್ನೊಂದು ರುದ್ರರು ಭೂರಿ |
ನಾಮಕಜೈಕಪಾದಹಿರ್ಬುಧ್ನಿ ಭೂರಿಶ್ರವಗಾನವಿಪೆ ||೨೯||
ಕೃಷ್ಣೈನುಳಿಧತು ರುದ್ರರು ಸಮರು ಶಲ |
ವಿರೂಪಾಕ್ಷ ನವತಾರ ಕೃಪ ವಿಷ್ಕಂಭನೂ ||
ಅಕ್ಷೀಣಬಲ ಪತ್ರತಾಪಕ ಸಹದೇವ |
ರಕ್ಷಘ್ನ ಸೋಮದತ್ತನು ಯೆನಿಸುತಿಹಗೆ ||೩೦||
ವಿರೂಪಾಕ್ಷ ವಿಷ್ಕಂಭ ಪತ್ರತಾಪಕ ಮೂರು |
ಹರನ ರೂಪಾಂತರಗಳಿವು ವಿವಸ್ವಾನ್ |
ಅರಿಯಮ ಪೂಷ ಭಗ ಸವಿತು ತ್ವಷ್ಟಾ ಧಾತ |
ವರುಣ ಶಕ್ರೋರುಕ್ರಮನು ಮಿತ್ರ ಪರ್ಜನ್ಯ ಗಾನವಿಪೆ ||೩೧||
ಶೌರಿನಂದನ ಭಾನು ಸವಿತೃನಾಮಕ ಸೂರ್ಯ |
ವೀರಸೇನನು ಯಮಾವಿಷ್ಟತ್ವಷ್ಟಾ ||
ಆರು ಜನರುಕ್ತರೆನಿಸರು ಪುರುಕ್ರಮ ಶಕ್ರ |
ಪಾರಿಧಿ ವಿವಸ್ವಾನ್ ಮಿತ್ರ ಪರ್ಜನ್ಯರಿಗೆ | ||೩೨||
ಪ್ರಾಣ ನಾಗಪಂಚಕ ಅಹಂಕಾರಿಕ |
ಪ್ರಾಣ ಪ್ರವಹ ವಿವಹ ಸಂವಹ ಸ್ವಹಾ ||
ಮಾನದಾವಹ ವಿಪಹ ಕಾಲ ಶ್ವಾನ ಯೇ |
ಕೋನ ಪಂಚಾಶನ್ ಮರುದ್ಗಣಸ್ಥರು ಯೆಂದು ||೩೩||
ಅನಿಳ ನಳ ಕುಮುದ ಮಂಡೂಕ ಸಾಂಗ ಶ್ವೇತ ಪಂ |
ಕನು ಕೃಷ್ಣ ಶುಚಿ ಪಂಕು ರಕ್ತ ಸಿಂಧೂ ||
ಹನುಮ ಭೀಮ ಯತಿ ಪ್ರದಿತ ಕಾಮ ಜಡ ಪಿಂಗ ಕಂ |
ಪನ ಪ್ರದ್ವಹ ಧನಂಜಯ ದೇವದತ್ತರಿಗೆ ||೩೪||
ಶುಕ ಶಂಕು ಗುರು ಕಾಂತ ಪ್ರತಿಭ ಸಂವರ್ತಕನು |
ಪಿಕ ಕಪಿಗಳಿವರು ಮರುತರು ಸವಿಸಾರಾ ||

ಒಂಭತ್ತು ಕೋಟಿ ದೇವತೆಗಳೊಳು ನೂರು ಜನ |
ಕೆಂಬರಿವರಿಗೆ ಸೋಮ ಪಾನಾರ್ಹರೂ ||
ಅಂಬುಜಾಪ್ತರ ಪೊಳಗುರುಕ್ರಮ ನುಳಿದು ಪದ್ಮ |
ಸಂಭವನ ಸಹರಾಗಿಹರ ಶತಸ್ಥರಿಗೆ || ೪೨ ||
ಮರುತ ತ್ರಯದು ವಹ್ನಿ ಯಮ ಸೋಮ ಶಿವ ದಿವಾ |
ಕರರಾರು ರುದ್ರ ಗರು ಯಿವರುಕ್ತರೂ ||
ಉರವರಿತ ಯೆಂಭತ್ತೈದು ಸಮರು ತವ್ಮೊಳಗೆ ||
ಸರಸಿಜೋದ್ಭವನ ಸುತರೆನಿಪ ಸನಕಾದಿ ಗಳಿಗಾನಮಿಪೆ || ೪೩ ||
ಸನಕಾದಿ ಗಳೊಳುತ್ತಮ ಸನತ್ಕುಮಾರ ಶಿಖಿ |
ತನುಜ ಪಾವಕನು ಪರ್ಜನ್ಯನು ಮೇಘಪ ||
ಎನಿಸುವನು ಶರಭ ಪೊಂದೇರೂಪ ಧರ್ಮ ರಾ |
ಜನ ಪತ್ನಿ ದೇವಕಿಯು ಶಾವ-ಲೆಯ ರೂಪ ವೆಂದಾನಮಿಪೆ ||೪೪||
ಯಮಭಾರ್ಯ ಶಾಮಲಾ ರೋಹಿಣೀದೇವಿ ಚಂ |
ದ್ರಮನಸ್ತ್ರೀ ಅನಿರುದ್ಧಗೇಹಿ ವೃಷಾ ||
ದ್ಯುಮಣಿಭಾರ್ಯಾ ಸಂಜ್ಞಾ ಗಂಗಾ ವರುಣ ಭಾರ್ಯ |
ಸಮರಾರು ಜನರು ಪಾವಕಗೆ ಕಿಂಚಿ ದಧಮರೆಂದಾನಮಿಪೆ ||೪೫||
ಎರಡು ಗುಣ ಮಿತ್ರಗಿಂದಧಮ ಪರ್ಜನ್ಯ ಯಿಾ |
ರೆರಡು ವಹ್ನಿಗೆ ಕಡಿಮೆ ಪಾದಮಾನೀ |
ಸುರಪ ನಂದನ ಜಯಂತನು ಪ್ರಹಲ್ಹಾದ ಯಿಾ |
ವರರು ಮುಖ್ಯರಧಮ ಪರ್ಜನ್ಯಗೆಂದೆಂದು ||೪೬||
ಎರಡು ಗುಣ ಪರ್ಜನ್ಯಗಿಂದಧಮಳು ಸ್ವಾಹಾ |
ರೆರಡಧಿಕ ಗುಣದಿ ಸ್ವಪತಿಗೆ ನೀಜಳೂ |
ಹರಿಶಕ್ರ ಶಶಿ ಅಶ್ವಿ ಯುಕ್ತಾಭಿಮಾನ್ಯ ಜಂ |
ದಿರಜ ಬುಧನವತಾರ ಸ್ವಾಹಾ ದೇವಿ ಗಧಮ ನೆಂದಾ ನಮಿಪೆ ||೪೭||
ಎನಿಸುವಳು ಶಲ್ಯ ಜರಾಸಂಧ ನಾತ್ಮಜಾ |
ಶ್ವಿನಿ ಭಾರ್ಯಾ ನಾಮಾಭಿಮಾನಿ ಉಷಾ ||

ಘನ ರಸಾಧಿಪ ಬುಧಗೆ ಕಿಂಚಿದ್ಗುಣ ಕಡಿಮೆ |
ಅನಳ ಪತ್ನಿಗೆ ದಶ ಗುಣಾಧಮಳು ಯೆಂದು ||೪೮||
ಧರಣಿ ಗಭಿಮಾನಿ ಯೆನಿಸುವ ಸೂರ್ಯಸುತ ಶನೇ |
ಶ್ಚರ ವೃಷಾದೇವಿ ಗೆರಡು ಗುಣಾಧಮಾ ||
ತರಣಿ ನಂದನಗೆ ಸತ್ಕರ್ಮಾಭಿಮಾನಿ ಪು |
ಷ್ಕರ ಕಡಿಮೆ ಪಂಚ ಗುಣದಿಂದ ಯೆಂದೆಂದು ||೪೯||
ನಾರದನ ಶಿಷ್ಯ ಪ್ರಹ್ಲಾದ ಭಾಲ್ಹೀಕ ಸ |
ವಿಾರ ಸಂಯುಕ್ತ ಸ್ವಹ್ಲಾದ ಶಲ್ಯಾ ||
ವ ಶೂರನೆಯನುಹ್ಲಾದ ಸವಿತ್ರನಾಪೇ ದಲಿ |
ತೋರಿದನು ದೃಷ್ಟಕೇತು ಯೆನಿಸಿ ಧರೆಯೊಳಗೆ ||೫೦||
ಕಾಮಾಂಶ ಯುಗ್ ಜಯಂತನು ಬಭ್ರುವಹ ವರುಣ |
ಭಾನುನು ಯುಧಾಮಾನ್ ಚಿತ್ರಗುಪ್ತಾ ||
ನಾಮಕ ಸುಹೋತ್ರನು ಮಣಿ ಭದ್ರಾಖ್ಯ ಸು ||
ತ್ರಾಮಃ ನವತಾರ ವೆಂದರಿದು ನಿತ್ಯದಲಿ ||೫೧||
ಚಾವನೋಚಿಥ್ಥ್ಯ ಋಷಿಗಳು ನೂರು ಚಾಕ್ಷುಷನು |
ರೈವತ ಸ್ವಾರೋಚಿಷೋತ್ತಮ ನು ||
ಸಾವರ್ಣಿ ಬ್ರಹ್ಮ ರುದ್ರಾಗ್ನ್ಹ ಸಾವರ್ಣಿ ತ್ರಯ |
ದೇವೆಂದ್ರ ದಕ್ಷ ಧರ್ಮಾಖ್ಯ ಸಾವರ್ಣಿ ಗಳೆಗಾನವಿಪೆ ||೫೨||
ಮನು ಗಳೇಕಾದಶರು ತದನಂತರದಿ ವಿರೋ |
ಚನ ಪುತ್ರ ಬಲ್ಯಾದಿ ಭಾವೀಂದ್ರರಾ ||
ಇನಿತು ನಾಮವ ಪೇಳೆ ಕರ್ಮ ದೇವತೆ ಗಳೆಂ |
ದೆನಿಸುವರು ಲೋಕದೊಳು ಸರ್ವತ್ರ ಸರ್ವದ ||೫೩||
ಬಲಿರದ್ಭುತಃ ಶಂಭು ವಿಧೃತಿ ರತಧಾಮ ನಿ |
ಷ್ಕಲುಷನು ದಿವಸ್ಪತಿಯು ಶುಚಿ ಸಪ್ತರು ||
ಕುಲಿಶ ಧರ ಪದ ಯೋಗ್ಯರನ್ಯ ಕರ್ಮಪ ನೃಪರು |

ತಾಮರಸಭವಯುಕ್ತನಾದ ವಿಶ್ವಾವಸು ಯು ।
ಧಾಮನ್ಯು ವೃತ್ರಭೋಜನನು ಆರ್ಯಮ ॥
ವ್ಯೋಮಮಣಿ ಯುಕ್ ಪರಾವಸು ಸುಸತ್ಯಜನ್ಮಿತ್ರ ।
ನಾಮಕರಾಗಿಪ್ಪ ಚಿತ್ರಸೇನನಿಗೆ । ॥೬೧॥
ಬಲನೆಂಬ ಗಂಧರ್ವ ಮೊದಲಾದ ನೂರು ಗೋ ।
ಕುಲದೊಳಗೆ ಗೋಪಾಲರೆನಿಸುತಿಪರು ।
ತಿಳಿವದೂರ್ವಶಿ ಮುಖ್ಯ ಅಪ್ಸರರೊಳಗೆ ಪಿಂ ।
ಗಳನಾಮ ಅಪ್ಸರಸ ಸ್ವರ್ಗಿಂಧ್ರಿ ಯೆನಿಪಳೆಂದಾ ನಮಿಪೆ ॥೬೨॥
ಸಕಲನ ಲಲನಿ ಪಾರ್ವತಿ ತ್ರಿಕೋತ್ತಮಳು ಪ ।
ಣ್ಮುಖ ಜನನಿ ಸಂಯುಕ್ತ ಅಭಿಮನ್ಯುನಾ ।
ಸಖಿ ಸುಭದ್ರಾ ತ್ರಿಜಟೆ ನಾಯಕರು ಪೂರ್ವದಲಿ ।
ಅಕಳಂಕ ಗೋಪಿಕಾ ಸ್ತ್ರೀಯರು ಅಪ್ಸರರೆಂದಾ ನಮಿಪೆ ॥೬೩॥
ನೂರುಳಿದು ಶತಕೋಟಿ ಋಷಿಗಳುತ್ತಮರ ಬಿ ।
ಟ್ಟೀರೆಂಟು ಸಾವಿರದ ನೂರೆನಿಸುವ ॥
ಶೌರಿ ಸ್ತ್ರೀಯರು ರಮಾವೇಶ ಯುಕ್ತರಗ್ನಿಗೆ ಕು ।
ಮಾರಕರು ಪಾವಕಗೆ ಅಧಮರೆಂದರಿದು ॥೬೪॥
ಇವರೊಳಧಿಕ ಕನೇರು ತ್ವಷ್ಟ್ರ ನಾಮಕ ಸೂರ್ಯ ।
ಕುವರಿ ಅಜಾನುಜರು ಕರ್ಮಜರಿಗೆ ॥
ಅಪರತೀರ್ಥವತ್ತುಗುಣದಿ ಅಜಾನಜರಿಗೆ ।
ದ್ವಿಜ ಕೃಶಾನು ಸೂನುಗಳು ಸಮರೆಂದರಿದು ॥೬೫॥
ಕೃಷ್ಣಾಂಗ ಸಂಗ ಗೋಪಿಯರಿಂದಲಿ ಭಕ್ತಿ ।
ದೃಷ್ಟ ಸಹಸ್ರ ಶತ ಸ್ತ್ರೀಯರಧಿಕಾ ॥
ವಿಷ್ಣು ಪತ್ನ್ಯಾವೇಶ ಬರಲು ಆಜಾನರಿಗೆ ।
ಶ್ರೇಷ್ಠರೆನಿಪರು ಪ್ರಾಕಕಾಲದಲಿ ಸಮರೆಂದು ॥೬೬॥
ನಂದ ಗೋಪಿನಿ ಅಗ್ನಿಪುತ್ರಗೇ ಸಹಸ್ರ ಗುಣ ।

ದಿಂದುತ್ತಮಳು ದೇವಕಿ ಯಶೋಧಿಗೆ ।
ವಂದ್ಯಳೆನಿಪಳು ವಸುದೇವ ಪುತ್ರ್ತಮ ಯೇಳು ॥
ಮುಂದಿಗಳನುಳಿದು ಚಿರಪಿತೃ ಶತಾಧಮರೆಂದು ॥೬೭॥
ಸ್ವಮುಖ ಪ್ರೇರಿತ ದೇವ ಗಂಧರ್ವಗಣ ಶತಾ ।
ಧಮ ಚಿರ ಪಿತೃಗಳಿಗೆ ನರಗಾಯಕ ॥
ಸಮುದಾಯ ನೂರು ಗುಣ ಕ್ಷಿತಿಪರೈವತ್ತು ।
ಸವಿತ ಗುಣ ಮನುಜೋತ್ತಮರು ಶತಾವರರೆಂದು ॥೬೮॥
ಪರಮ ಮುಖ್ಯ ಸುಶಾತ್ವಿಕರು ಯೆನಿಪರೀ ಶನ್ಯೈ ।
ಸ್ಥಾನ ಪರಿಯಂತ ಘನಾಂತವಾಗಿ ॥
ಕರೆಸುವರ ಮುಖ್ಯ ತಾತ್ವಿಕರೆಂದು ತಮ್ಮೊಳಗೆ ।
ಶರವಶ ಶತ ಸಹಸ್ರ ನಂತ ಗುಣದಿ ಕ್ರಮದಿ ॥೬೯॥
ದೇವತಾಸ್ತ್ರೀಯರು ತಮ್ಮ ಪತಿಗಳಿಗೆ ದಶ ಗು ।
ಣಾವರರು ಯೆನಿಪರು ಮುಕ್ತಿಯೊಳಾದರು ॥
ಈ ವಿಧದಿ ನೀಚೋಚ್ಚ ಕ್ರಮ ವರಿತು ಭಜಿಪರಿಗೆ ।
ಈವರಖಿಳಾರ್ಥಗಳ ಅಹಿಕ ಪಾರತ್ರದಲಿ ॥೭೦॥
ಭಕ್ತಿ ವಿಜ್ಞಾನಬಲ ದೇವತಾ ಗಣಕಭಿ ।
ವ್ಯಕ್ತಿ ತತ್ತದ್ಯೋಗ್ಯತಾನುಸಾರಾ ॥
ಮುಕ್ತಿ ಪರಿಯಂತ ಭಗವದ್ರೂಪ ದರ್ಶನ ಪ್ರ ।
ಯುಕ್ತ ಮಾಳ್ಪರು ಸಾಧನಗಳ ನಿಷ್ಕಾಮಕದಿ ॥೭೧॥
ಪ್ರತಿ ದಿನಗಳಲ್ಲಿ ಸದ್ಭಕ್ತಿ ಪೂರ್ವಕ ತ್ರಿಪ ।
ಪ್ರುತಿ ಪದಾತ್ಮಕ ಬ್ರಹತ್ತಾರತಮ್ಯಾ ॥
ಜಿತವಾಗಿ ಕಂಠ ಮಧ್ಯದಲಿ ಧರಿಸುವರ ಶಾ ।
ಶ್ವತ ಕರುಣಿ ಸಂತೈಪ ಸರ್ವಕಾಲದಲೀ ॥೭೨॥
ಪುರುಷ ರೂಪನೆ ಕ್ಷರಾಕ್ಷರ ಪುರುಷ ಪೂಜ್ಯ ಸಮ ।
ಚರಣ ಪಂಕಜ ಛಾರು ಚರಿತ ಸ್ಮರತಾ ॥

ಕರುಣಾಕರೇಶ ಕಾಮಿತ ಕಲ್ಪತರು ಜನ್ಮ ।
ಮರಣ ವರ್ಜಿತ ಜಗನ್ನಾಥ ವಿಠ್ಠಲ ರಾಯಗಾ ನಮಿಸೆ ॥೭॥

ಗುರು ಪುರಂದರ ವಿಠಲ

## ೧೯ ಅಪರೋಕ್ಷ ತಾರತಮ್ಯ ಸಂಖ್ಯಾದಿ

### ಧ್ರುವ ತಾಳ

ವಿಶ್ವ ವ್ಯಾಪಕ ಮೂರುತಿಯಾಗಿ ಅವ್ಯಾಕೃತವನು ವ್ಯಾ ।
ಪಿಸಿ ಸುಗಂಧ ವ್ಯಾಪಿಸಿದಂತೆ ।
ಬೊಮ್ಮಾಂಡ ಅವ್ಯಾಕೃತವು ಬಿಗಿದಪ್ಪುವ ನಿನ್ನ ।
ವಿಶ್ವಮೂರುತಿ ಪೊಂದಿಪ್ಪುದು ಸರ್ವಕಾಲದಲ್ಲಿ ।
ಬೊಮ್ಮಾಂಡವೆಲ್ಲ ಪೊಂದು ಘನ ಅಂಗುಷ್ಟವೆ ವ್ಯಾಪ್ತ ।
ಸರ್ವದೇಹಾವಕಾಶ ವಾಗಿಪ್ಪ ಅವ್ಯಾಕೃತವೆ ।
ವಿಶ್ವ ಯಿಾ ಮಹಾ ಮೂರುತಿಯಲ್ಲಿ ಪೊಂದನಂತವಾಗಿಪ್ಪ ।
ತ್ರೀಮೂರುತಿಗಳು ಆದರಲ್ಲಿಪ್ಪವು ಪೊಂಪೊಂದು ಸಹಸ್ರ ।
ಬ್ರಹ್ಮಕಲ್ಪದ ಜೀವರಲ್ಲಿರುವರು ।
ರೋಮರೋಮ ಬೊಮ್ಮಾಂಡಗಳಿಲ್ಲ ಕಾರಣ ।
ಈ ಮೂರ್ತಿ ವ್ಯಾಪ್ತಿಯಿಂದ ಲಕುಮಿದೇವಿ ।
ಉಪಾಸನೆಯ ಮಾಡುವೆನೆಂದು ಧ್ಯಾನಿಪಳು ಪ್ರತ್ಯಕ್ಷವಾಗುವದು ।
ಗುಣಗಳು ಕಡೆಗಾಣಲಾರನೆ ಸಾಕಲ್ಯವಾಗಿ ।
ಲಕುಮಿದೇವಿ ಗುರು ಪುರಂದರ ವಿಠಲ ವಿಶ್ವಾ ॥೧॥

### ಮಟ್ಟ ತಾಳ

ಸಿರಿ ಸರಸಿಜೋದ್ಭವ ವಾಣಿ ಭಾರತಿಯರು ।

ಪರಶುಕ್ಲತ್ರಯರೆಂವರು ಮೂಲಪಾಯು ಕೂಡಿ |
ವರಲಕುಮಿ ಯೆಡೆಯನ ಗುಣಂಗಳನು ಯಿ |
ವರು ಕಡೆಗಾಣದೆ ಮೂರುತಿ ಯಿದ್ದು |
ಸರಸಿಜೋದ್ಭವ ಮಹತತ್ವದಿ ಕುಳಿತ |
ಪರಿಯಂತವು ತನ್ನ ಭವನಾನ ಯೆಲ್ಲ್ಯೆಳ್ಳ ಅಲ್ಲಿ |
ಪರಿಯಂತವು ಬಲ್ಲ ಕಲವು ರೂಪಾ |
ನಿಸುತ ಅವ್ಯಾಕೃತದಲ್ಲಿ ವ್ಯಾಪ್ತವಾದುದಾ |
ತಾರಾ ಮಂಡಲದಂತೆ ಕಾಂಬ ಪಂಚ ಮುಖಾದಿ ದೇವತೆಗಳು |
ಗರುಡ ಶೇಷ ರುದ್ರ ತನ್ನ ಭವನಾನಯಲ್ಲ್ಯೆಳ್ಳ ಅಲ್ಲಿ |
ಪರಿಯಂತ ಬಲ್ಲರು ಕೆಲವುರೂಪಾ ಮಹತತ್ವದಲಿ ವ್ಯಾಪ್ತವಾದುದಾ |
ತಾರಾ ಮಂಡಲದಂತೆ ಕಾಂಬರು ಮತ್ತೆ ದೇವತೆಗಳು ತಮ್ಮ |
ಸ್ವರೂಪದಂತಿಪ್ಪರು ಅಳವಿಲಿ ಕೇವಲ ನಖವ ಕಾಂಬರು ಈ |
ಪರಿ ವ್ಯಾಪ್ತಿಗಳುಳ್ಳ ಮೂರುತಿಯಾಗಿಪ್ಪ |
ಗುರು ಪುರಂದರ ವಿಠಲನ ಪ್ರಭುವಿಂಗೆ ನಮೋನಮೊ ॥ ೨ ॥

ರೂಪಕ ತಾಳ

ಸ್ಪಷ್ಟದಲ್ಲಿ ಭೇದವುಳ್ಳ ಕಾರಣ |
ಪರಿಮಾಣದೊಳು ಕಡಿಮೆಯುಳ್ಳ ಕಾರಣ ಪ್ರಬ್ಬರಿಂದೊ |
ಬ್ಬರು ಉತ್ತಮರಾಗಿ ಸೇವಿಪರು |
ನಿನ್ನ ಚರಣ ಕಮಲವ ಗುರು ಪುರಂದರ ವಿಠಲನೆ ತಮ್ಮೊಳುತಾವು ॥೩

ಝಂಪೆ ತಾಳ

ಅಪಾರಮಹಿಮೆ ನೆರಹಿಕೊಂಡು ಅಪ್ರಮೇಯನಾಗಿ ನೀನು |
ಸರ್ವ ದೇವಗಳ ನೊಂದೊಂದು ವ್ಯಾಪಾರಗಳಲಿಟ್ಟ |
ಭೀಷಾಸ್ಮಾ ಎಂಬ ಶ್ರುತ್ಯರ್ಥದಿಂದ ಭೂತವಾಯು |
ತನ್ನಿಂದ ಮಿಕ್ಕ ದೇವತೆಗಳ ಪ್ರೇರಣೆ ಕ್ರಮದಿಂದ |

ಸೂತ್ರನಾಮಕನು ತಾ ಸರ್ವದೇವತೆ ಗಳೊಳು ।
ಒಬ್ಬ ಘಾಳಿಯಾಗುವ ಅಗ್ನಿಯಾಗಿ ದಹಿಸುವನೊಬ್ಬ ।
ಅಗ್ನಿಯಾಗಿ ದಹಿಸುವನೊಬ್ಬ ಸದಾ ಬೆಳಗುತಿಪ್ಪವೊಬ್ಬ ।
ಸರ್ವ ದಂಡಿಸುವಾ ವೊಬ್ಬ ಶೀತಳವಾಗಿ ।
ತನ್ನಿಂದಲನುಸುಸುಖ ಜಗಕೆ ಯೆಂತು ಮಾಡುವರು ।
ಬಿಡದೆ ಮೃತ್ಯುಬಂದು ಅರಸಿಕೊಳ್ಳುತಿಪ್ಪದು ।
ಈಸರ್ವ ವ್ಯಾಪಾರವು ಹರಿಯು ಆಧೀನ ದಿಂದ ಚತುರ್ಮುಖನು ।
ಅನಂತ ಚತುರ್ಮುಖರಿಂದ ಸೇವಿತ ಪಾದವುಳ್ಳ ।
ಷಟ್ಪದರಸು ಗುರು ಪುರಂದರ ವಿಠಲಯ್ಯಾ ॥ ೪ ॥

ತ್ರಿವುಟ ತಾಳ

ಪ್ರಾಣಾಪಾನ ವ್ಯಾನೋದಾನ ಸ ।
ಮಾನ ವಾಯು ನಾಮಕನಾಗಿ ಮುಖ್ಯ ।
ಪ್ರಾಣ ಅವರಲ್ಲಿದ್ದು ಪ್ರೇರಿಸುವಾ ।
ಮುಖ್ಯನೀತನು ಅಮುಖ್ಯರವರು ।
ಪ್ರಾಣನಿಂದ ನಿನ್ನರೂಪವು ಪ್ರಾಣಶಬ್ದವು ಮೂಲದಿಂದುಳ್ಳ ।
ಪರಮಸುಖನಿಧಿ ಮುಖ್ಯನೀತನು ವ್ಯಾಪ್ತನಾಗಿ ಪ್ರೇರಿಸುವಿ ।
ಗುರು ಪುರಂದರವಿಠಲರೇಯನ ಅನಾದಿ ನಾಮಾ ॥ ೫ ॥

ಅಟ್ಟ ತಾಳ

ನಾಭಿದೇಶದಲ್ಲಿ ವಾಯುರೂಪದಲ್ಲಿ ವಾಯುಬೀಜನಾಗಿ ।
ವಾಯು ವಂತರ್ಗತನಾಗಿ ಶೋಷಿಸುವಿ ದುಷ್ಕರ್ಮಯಾ ।
ಹೃದಯ ಸ್ಥಳದಲ್ಲಿ ತ್ರಿದಳ ಕಮಲದಲ್ಲಿ ಅಗ್ನಿ ಬೀಜನಾಗಿ ।
ಅಗ್ನ್ಯಂತರ್ಗತನಾಗಿ ದಹಿಸುವಿ ಮತ್ತೆ ಕೆಲವು ಪಾಪವಾ ।
ಶಿರೋಭಾಗದಲ್ಲಿ ವರುಣರೂಪದಲ್ಲಿ ।
ವರುಣಬೀಜನಾಗಿ ವರುಣಾಂತರ್ಯಾಮಿ ಯಾಗಿ ।
ವೃಷ್ಟಿಯಾ ಸುರಿಸುವಿ ಅಮೃತವಾ ।

ತತ್ವನಾಮಕನಾಗಿ ಸರ್ವ ಫಲವ ನೀವಿ ಕರ್ಮದ ।
ಸುಖ ಗುರು ಪುರಂದರ ವಿಠಲಾ ॥ ೬ ॥

ಏಕ ತಾಳ

ಪ್ರಾರಬ್ಧ ಸಂಚಿತ ಆಗಾಮಿಗಳಿಂದ ಅಧಿಕವಾದುದ ಮಹ ।
ದುಷ್ಕರ್ಮಗಳಿಗೆ ಮುಕುತಿಯೋಗ್ಯರಿಗೆ ಕರುಣಿ ನೀದಯವಾಡಿ ।
ವಿಾರಿದ ದುಷ್ಕರ್ಮವ ಕಲಿಗೆ ಈವಿಧ ತಮ್ಮ ಸ್ವರೂಪವ ।
ವಿಾರಿ ಸುಕೃತವ ಮಾಡಿದರೆ ದೇವತೆಗಳಿಗೆ ಯಾವೆಯಾಗಿ ।
ಮುಕುತಿ ಯೋಗ್ಯರಿಗೆ ಯೆಂಥಾದರೆ ಸ್ವರೂಪ ಸುಖಾತ್ತ ಸಲಹುವಿ
ಅನುಪಮ ಗುಣ ಗುರು ಪುರಂದರ ವಿಠಲಾ ॥ ೭ ॥

ಜತ್ತೆ

ಸರ್ವ ಕರ್ಮಗಳ ಪ್ರಾಣಾಂತರ್ಯಾಮಿಯಾದ ಶ್ರೀಹರಿಗೆ ।
ಅರ್ಪಿಸಿದರೆ ವೊಂದೊಂದು ಅನಂತ ಫಲ ಮಾಡಿ ತೋರುವಾ ___
ಗುರು ಪುರಂದರ ವಿಠಲ ರೇಯನು ಅನಾದಿ ಕಾಲದಲಿ ॥ ೮ ॥

ಮಧ್ವೇಶಾರ್ಪಣಮಸ್ತು

ವಿಜಯ ವಿಠ್ಠಲ

## ೨೦ ಅಪರೋಕ್ಷ ತಾರತಮ್ಯ ಸುಳಾದಿ

ಲಿಂಗ ದೇಹದ ಕಾರ್ಯ ಮುಕ್ತಿತವೊ ಜನರ ಸುಖ ದುಃಖ
ಬಿಂಬಾಕೃತಿ ಬಿಂಬ ದರ್ಶನಕಾಲ

### ಧ್ರುವ ತಾಳ

ಜೀವ ಸಚ್ಚಿದಾನಂದ ಶರೀರ ಪರಾಧೀನ ಅವಕಾಲಕ್ಕು ಆಗಿಪ್ಪದು ।
ಜೀವಾಂಗುಷ್ಟ ವಿಶಿಷ್ಟ ಅಂತರಾತ್ಮ ಜ್ಞಾನಾತ್ಮ ।
ಈ ವಿಧ ಮೂರ್ತಿಗಳುಂಟು ಮಿಕ್ಕ ।

ರಾವಿನಲ್ಲಿ ತತ್ರಸ್ಥಾನದಲ್ಲಿ ।
ಆ ವಿಶ್ವಾದಿಗಳುಂಟು ನಿಬಿಡಿಯಾಗಿ ।
ಜೀವಕ್ಕೆ ಯೆಂದೆಂದಿಗೆ ತೊಲಗದ ।
ಭಾವಜ್ಞಾನ ಕೇವಲ ಸ್ವರೂಪ ಭೂತವೆನ್ನಿ ।
ಪಾವಕ ಮಧ್ಯದಲ್ಲಿ ದ್ರವ್ಯ ಪೊಂದಿಪಲಿದಕೆ ।
ಕಾವದದೆ ಬಿಡದಯ್ಯಾ ಇದ್ದನಿತು ।
ಜೀವಕ್ಕೆ ಲಿಂಗದೇಹ ಯಾಪರಿ ಯಿದ್ದರಾಗೇನು ।
ನೋವಾ ನೋವಾಗದಲೆ ಸುಮ್ಮನಿರದು ।
ಈವದು ಯಾಬಗೆ ಸುಖ ದುಃಖ ಲಿಂಗದೇಹ ।
ಜೀವಸ್ವರೂಪ ವಲ್ಲ ಭಿನ್ನ ವಹುದು ।
ಸಾವು ಪುಟ್ಟುವದಕ್ಕೆ ಕಾರಣ ವಾಗಿಪ್ಪದು ।
ಯಾವತ್ತು ಕರ್ಮವು ವುಣಿಸಿಕೊಳುತ ।
ಈ ವೃತ್ತಿ ಜ್ಞಾನವನ್ನು ಪೋಗದಲೆ ನಿಜ ।
ಭಾವದಲ್ಲಿ ನಿಲ್ಲದು ನಿಧಾನಕ್ಕೆ ।
ಜೀವಪ್ರಕಾಶ ಬಂದು ಲಿಂಗಮಿಶ್ರಿತವಾಗಿ ।
ಆವವ ಕಾಯುವ ಹಿಂದು ಗಳಿದು ।
ತಾ ವ್ಯಾಪ್ತವಾಗಿಪ್ಪುದು ಸ್ಥೂಲೇಂದ್ರಿಯೊಳು ಪೊಕ್ಕು ।
ಧಾವಂತಾ ಬಹಿರದಲ್ಲಿ ಬಡಿಸುವದು ।
ತ್ರಿವಿಧ ಗುಣ ವುಳ್ಳ ಬದ್ಧಪ್ರಕೃತಿ ಸ್ಥಿತಿ ।
ಆವಿರಿಂಚಿಗೆ ಮಾತ್ರ ದಗ್ಧಪಟಪೋ ।
ಆವಿಷ್ಟನಾಗಿ ಕಲಿ ಅಪ್ಪಿಲ್ಲ ಆತನೊಬ್ಬ ।
ಪಾವಿತ್ರ ಕಾಣೋ ಸದಾ ವಾಯು ಸಹಿತ ।
ಭಾವಜ ವೈರಿ ಪಿಡಿದು ಮಿಗಲಾದ ಚೇತನಕ್ಕೆ ।
ಕೈವಲ್ಯ ಯೋಗ್ಯರಿಗೆ ಸ್ವರೂಪ ಕ್ಲೇಶ ವುಸಿ ।
ನೋವಾಪರೂ ಭಿನ್ನ ಭಿನ್ನ ಕಾಣೋ ।

ಕಾವಳ ಯೋಗ್ಯರಿಗೆ ಚಿದ್ರೂಪಿಗಳಂತೆ ।
ಕೇವಲವಾದ ನಿಜ ಸುಖವೆ ಯಿಲ್ಲಾ ।
ಆ ವೃತ್ತಿ ಸುಖ ವೃಂಟು ಲಿಂಗಭಂಗಾಂತರದಲ್ಲಿ ।
ಬೇವೋದು ಶತಸಿದ್ಧ ನಿಜ ದುಃಖದೀ ।
ಸೇವಕರೊಡಿಯ ಶ್ರೀವಿಜಯ ವಿಠ್ಠಲ ರೇಯ ।
ಪಾವವಾಸಿ ಯಿಂದ ಯೆಲ್ಲರಕಾವುತಿಪ್ಪ ॥ ೧ ॥

ಮಟ್ಟ ತಾಳ

ಅಂತರಾತ್ಮ ಮೂರ್ತಿ ಜೀವರ ಸ್ವರೂಪ ।
ದಂತೆ ಯಿಪ್ಪದು ಕಾಣೊ ಯೆಲ್ಲೆಲ್ಲಿ ನೋಡಿದರು ।
ಅಂತರಿಲ್ಲದೆ ನಿತ್ಯ ಅವರವರ ಚೇಷ್ಟೆ ।
ಯಂತೆ ವ್ಯಾಪಾರವನ್ನು ಮಾಡಿ ಮಾಡಿಸು ತಿಪ್ಪ ।
ಅಂತರಂಗ ದೋಳೀತ ಮಾಡುವ ಪರಿ ಅ ।
ನಂತ ಮೂರುತಿಗಳು ವೊಂದೇಕಾಲದಲ್ಲಿ ।
ನಿಂತ ಕುಳಿತು ಮಲಗಿ ನಾನಾ ಬಗೆಯಿಂದ ।
ಸಂತತ ಸ್ವರೂಪ ಕರಣ ಮಿಶ್ರವಾಗಿ ।
ಭ್ರಾಂತಿಗೊಳಿಪ ಕಾಯ ತದಾತ್ಮಕದಲ್ಲಿ ।
ನಿಂತವರೊಳಗಿದ್ದು ಚರಿಯ ಮಾಳ್ಪಲೀಲೆ ।
ಎಂತಿಳಿದು ಗುಣಿಸು ಯಿಾತನ ನಿರೀಕ್ಷಿಸದೆ ।
ಸಂತರಿಗೆ ಗತಿ ಸೇರುವ ಬಗೆ ಯಿಲ್ಲ ।
ಹಂತರಿಗಾದರು ಯಿಾತನ ಕಾಣದಲೆ ।
ಸಂತಾಪವ ಬಡುವ ಗತಿ ಯಾಗದು ಕೇಳಿ ।
ಕಂತು ಜನಕನ ದ್ವೇಷಿಗಳಿವರೆನ್ನು ।
ಅಂತವಿಲ್ಲದ ಮಹಿಮ ವಿಜಯ ವಿಠಲ ರೇಯ ।
ಎಂತೆಂತು ನೆನೆಸಿದರು ಅದರಂತೆ ಫಲವೀವ ॥ ೨ ॥

ತ್ರಿವಿಡಿ ತಾಳ

ಬೋಮ್ಮನಾರಂಭಿಸಿ ಪುಷ್ಕರ ಪರಿಯಂತ |
ತಮ್ಮ ತಮ್ಮ ಮೂರ್ತಿಯಾರಾಧನೆ |
ಸುಮ್ಮಾನದಲಿ ಮಾಡಿ ಕಾಣುತಲಿಪ್ಪರು |
ಅಮ್ಮಹಾ ಯೆರಡು ಘಳಿಗೆ ತನಕ |
ರಮ್ಮೇಶನಪಾದ ಸ್ಪಷ್ಟತ್ವದಲಿ ಭೇದ |
ಘಮ್ಮನೆ ನೋಳ್ಪರು ಪೊಳವಬಿಂಬಾ |
ಈ ಮಹಾತ್ಮರಬಿಟ್ಟು ಉಳಿದಾ ದವರ ಕೇಳಿ |
ಒಮ್ಮನದಲ್ಲಿ ದೇವ ಗಂಧರ್ವರು |
ಸಮ್ಮತರಹುದು ಕರ್ಮಪ ನಿಂದಿತ್ತಲೊ |
ಸಮ್ಮಾಧಿಯಲಿ ಮಾತ್ರ ಪಾದದನಿತು |
ಕ್ರಮ್ಮಾನುಸಾರದಲ್ಲಿ ವ್ಯಾಪ್ತ ದರ್ಶಿಗಳಾಗಿ |
ತಮ್ಮ ತಮ್ಮೊಳಗೆ ದೇವನ ನೋಳ್ಪರು |
ಹಿಮ್ಮಟ್ಟದಿಪ್ಪರು ಯಿದಕೆ ಸಂಶಯಸಲ್ಲ |
ಅಮ್ಮೃಸು ಯಿವರಿಲ್ಲ ಸಾಂಶರೆಂದು |
ಈಮ್ಮಹಿಯೊಳಗಿರುವ ಅಪ್ರತಿಕಾಲಂಬನರು |
ಆಮ್ಮಿಶ್ರ ತತ್ವಕಧಿಕಾರಿಗಳಲ್ಲ |
ರಮ್ಮೆಯರಸ ನಮ್ಮ ವಿಜಯ ವಿಠಲ ರೇಯ |
ಸಮ್ಮಂಧಿಗನಹುದೊ ಭಜಿಸುವ ಜನಕೆ || ೩ ||

ಅಟ್ಟ ತಾಳ

ಮುನಿ ಮನುಗಳು ಪಿತೃ ಮನುಜೋತ್ತುಮ |
ದಿನಪರಿ ಮಂಕುತಿ ಯೋಗ್ಯರು ತಮ್ಮ ತಮ್ಮೊಪಾ |
ಸನೆ ಮಾಡುವರು ಪಾದಮಾತ್ರ ಪಿಡಿಪುವಂ |
ಜನೆ ಯಿಲ್ಲದೆರಡು ಘಳಿಗೆ ಪರಿಯಂತ |
ವನಜನಾಭನ ನೋಡುವರು ತಾರತಮ್ಯ |

ವನುಸರಿಸಿ ನಿಂತು ಸ್ತೋತ್ರವನು ಮಾಡುತ ।
ದಿನದಲ್ಲಿ ಧ್ಯಾನ ಮರಿಯದೆ ಮನಸಿಲಿ ।
ಅನಿಮಿಷರೆಲ್ಲರು ಪ್ರವಾಹತೆರದಂತೆ ।
ಇನಿತು ಪೇಳಿದ ಪ್ರಕಾರ ಹರಿಮೂರ್ತಿ ।
ಯನು ಕಾಂಬುವರಯ್ಯಾ ಯಿದಕೆ ಶಂಶಯ ವಿಲ್ಲ ।
ಚಿನುಮಯ ಮೂರುತಿ ವಿಜಯ ವಿಠಲ ರೇಯ ।
ತನಗೆತಾನೇ ಯಿವಾಪರಿಯಲ್ಲಿ ಕರುಣಿಪಾ ॥ ೪ ॥

ಆದಿ ತಾಳ

ತನು ತಮ್ಮ ಸ್ಥಾನದಲ್ಲಿ ತಮತಮ್ಮ ಬಿಂಬವನು ।
ಶಮದಮ ನಿಷ್ಠೆಯಿಂದ ಭಜನೆಯ ಮಾಡುವರು ।
ತಮ್ಮ ಸ್ಥಾನದಲ್ಲಿದ್ದ ಪರಮಾತ್ಮನ ನಿತ್ಯ ।
ಮಮತೆಯು ತೋರದು ಜೋತಿಯೊಂದದಿ ಅನೂ ।
ತ್ತಮರು ಕಾಣುವರು ಯಿನಿತು ಸರ್ವರುಕೇಳಿ ।
ಸಮಗುಣಾಂಬುಧಿ ನಮ್ಮ ವಿಜಯ ವಿಠಲ ರೇಯ ।
ತಮೋ ಯೋಗ್ಯರಿಗೆ ಯಿದರಂತೆ ದ್ವೇಷ ಹೆಚ್ಚಿಸುವಾ ॥ ೫ ॥

ಜತೆ

ಅವರವರ ಯೋಗ್ಯತದಂತೆ ನಡೆಸುವನು ನಮ್ಮ ।
ಪನವಮಾನಂತರ್ಯಾಮಿ ಶ್ರೀವಿಜಯ ವಿಠಲ ಸ್ವಾಮಿ ॥ ೬ ॥

ಗುರು ಪುರಂದರ ವಿಠಲ

## ೨೧ ಮುಕ್ತರ ತಾರತಮ್ಯ ಸುಳಾದಿ

ಧ್ರುವ ತಾಳ

ಮುಕುತಿಯು ಸುಖದೊಳು ಪರಮಸುಖ ವೆಂದಳಿಯದ ।
ಸರ್ವ ವಿಷಯ ಭೋಗಂಗಳು ಅಲ್ಲಿ ಅಪ್ರಾಕೃತವಾದ ।

ಶುದ್ಧ ಸಾತ್ವಿಕರು ಸೃತಿ ಸಮುಂಧ ಎರದೆ ।
ಸೃಷ್ಟಿಯನು ನಿರ್ಮಾಣಿಸಿ ಸುಖಭೋಗಕೆಂತೊ ।
ಅನುಭವ ವಾಗುವಂತೆ ಸರ್ವಜೀವರಿಗೇ ।
ಮುಕುತಿ ಸುಖದೊಳು ಅತಿಸೂಕ್ಷ್ಮ ಜೀವರದರೊಳು ।
ಮೂರು ಬಗೆಯಿಂದುತ್ತಮ ಮಧ್ಯಮಾಧಮರು ।
ಕಡಿಮೆ ಸೂಕ್ಷ್ಮಗಳುಳ್ಳ ಯಿವರಿಗೆ ಸೂಕ್ಷ್ಮದಲ್ಲಿ ಸುಖಾನುಭವವೆಂತೊ।
ದೇವತೆ ಗಳಲ್ಲದೆ ಕೆಲವ ಮುನಿಗಳು ಮಾತ್ರ ಕೆಲವು ಜೀವರಿಗೆ ।
ಭೋಗ ಬೇಕೆಂದರೆ ಯಿದ್ದ ಸೃಷ್ಟಿಯಾದ ಶರೀರಗಳಿಂದ ಭೋಗಿಪರು
ನೀಜಜೀವರಿಗೆ ಶರೀರತತ್ತ್ವ ಯೋಗ್ಯತೆಯಿಲ್ಲದಿದ್ದರೆ ।
ಅತಿಸೂಕ್ಷ್ಮವಾಗಿ ಯಿಂತು ಜೀವಕ್ಕೆ ಭೋಗಾನುಕೂಲ ।
ಅಂಥಾದ್ದೆ ಸೃಷ್ಟಿಯಿಂದ ಅನಾದಿಸುಖವಿತ್ತು ।
ಪಾಲಿಪ ಗುರು ಪುರಂದರ ವಿಠ್ಠಲ ರೇಯಾ ॥ ೧ ॥

ಮಟ್ಟ ತಾಳ

ತ್ರಿವಿಧ ಕರ್ಮಂಗಳು ನಿನ್ನಾಧೀನವಾಗಿ ।
ಅನಂತ ಕಾಲದಲ್ಲಿ ರಮಾಬೊಮ್ಮಾದಿಗಳು ।
ನಿನ್ನ ದಾಸರೆಂಬ ತಾರತಮ್ಯದಿಂದ ।
ಶ್ರವಣ ಮನನ ನಿಜ ಧ್ಯಾಸನಗಳನ್ನು ।
ಮಾಡುತಿರಲಾಗ ಆಗಾಮಿ ಸಂಚಿತಗಳ ಕಳದು ।
ಪ್ರಾರಬ್ಧ ಭೋಗವು ಅನುಭವಿಸದಲ್ಲದೆ ।
ಕೂಡಿಡ ಲಕ್ಷಣ ಕಾರಣ ಸಂವತ್ಸರ ಭೋಗ ।
ಒಂದು ದಿನದಲ್ಲಿ ಕಡೆಗೈದುವಂತೆ ।
ಶ್ವಾನ ಸೂಕರಾದಿ ಜನ್ಮಂಗಳು ಕ್ಲಿಪ್ತಿಗೆ ಕಡಿಮ್ಯಾಗದು ।
ಅಂದೇಪುಟ್ಟೀ ಅಂದೇ ಮೃತವಾಗಿ ಜನುಮ ನೀಗುವನಿನ್ನ ।
ಪರಮಾನುಗ್ರಹದಿಂದ ಸ್ವರೂಪ ಸುಖವನ್ನು ।
ವ್ಯಕ್ತ ಮಾಡುವದಲ್ಲಿ ನೀ ಕಾರಣನಾದ ಕಾರಣ ।

ಈ ಪರಿಯಲಿ ಕಡೆಗೈದಿಸುವ ಗುರು ಪುರಂದರ ವಿಠಲ ಮುಕುತಿ —
ಪ್ರದನೀನು ॥ ೨ ॥

ರೂಪಕ ತಾಳ

ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಸಾರ್ಷ್ಟಿಯೆಂಗಳು ।
ಯೋಗ್ಯ ಜೀವರಿಗೆ ಆಲೋಕದಲ್ಲಿಪ್ಪುದು ಸಾಲೋಕ್ಯವೆಂಬುದು ।
ಆ ಪಟ್ಟಣ ಸಮೀಪದಲ್ಲಿಪ್ಪುದು ಸಾಮೀಪ್ಯ ವೆಂಬುದು ।
ಶಂಖಚಕ್ರಗದೆಪದ ಮಧರಂಗಾಗಿಸರ್ವರುಸಾರುಪ್ಯವೆಂಬ ಮುಕುತಿಯೆಸವುವು
ಹಂವಾಯುಗಳಲ್ಲಿ ತತ್ಸ್ವಾಭಿಮಾನಿ ದೇವತೆಗಳಗೆ ।
ಸಾಯುಜ್ಯವೆಂಬ ಮುಕುತಿಯು ನೋಡಯ್ಯಾ ।
ಹರಿಸರ್ವಾಂಗದಿಯಿಪ್ಪುದು ಚತುರ್ಮುಖಗೆ ಸಾರ್ಷ್ಟಿ ।
ಎಂಬುವದು ಪಂಚವಿಧ ಮುಕುತಿಯೆಂಬುವರು ।
ಋಷಿಮನುಜೋತ್ತಮರು ಚತುರ್ಮುಖನಿಂದ ಕೂಡಿ ।
ಶ್ರೀವಾಸುದೇವ ಶ್ವೇತದ್ವೀಪವಾಸ ಸಂದರುಶನದಿಂದ ।
ಇದ್ದಾವರಕಗಳ ಬಿಟ್ಟು ಸಮುದಾಯದಿಂದ ಕ್ರಮ ಭಾಗ ವಾಗಿ ।
ಚತುರ್ಮುಖನಿಂದ ನಾರದ ಪರಿಯಂತ ಯಿಪ್ಪಆವರಕವ ನೀಗೆ ।
ಮುಕುತರಾದರು ಮನುಜೋತ್ತಮರಿಂದ ಮೊದಲಾಗಿ ॥
ತೃಣಜೀವ ರಿಂದ ಕಡೆಯಾಗಿ ।
ಜೀವಾಚ್ಛಾದಕ ಪರಮಾಚ್ಛಾದಿಕ ವೆಂದು ಜೇರಿಪ್ಪುದು ।
ಜೀವಾಚ್ಛಾದಕವನು ಸಂಹರಿಸೆ ಪರಮಾಚ್ಛಾದಕ ।
ಕಡೆಕಡೆಗೊತ್ತಿ ಮುಕ್ತರಮಾಡುವೆ ।
ಅನಾದಿಕಾಲದಿ ಮುಕುತಿದಾಯಕ ।
ಗುರು ಪುರಂದರ ವಿಠಲ ಆ ಲೋಕದಲಿಪ್ಪುದು ॥ ೩ ॥

ಝಂಪೆ ತಾಳ

ಕಾಲಚಕ್ರದಿಂದ ಬೆಳಗುತಿಪ್ಪ ಬ್ರಹ್ಮಾಂಡದೊಳು ।
ಚಕ್ರಾಧಾರವಾಗಿ ತಿರಗುತ್ತ ಬರಲೂ ।

ಅಪ್ರಾಕೃತವಾದ ಶ್ವೇತದ್ವೀಪವು ಅನೇಕ ಉನ್ನತವಾದ ।
ಗೋಪುರ ಪ್ರಾಕಾರದಿಂದೊಪ್ಪುವ ಪಟ್ಟಣಕ್ಕೆ ।
ಸಮ್ಮಂಧವಾಗಿರುವ ಅಲ್ಲಿ ನಿನ್ನ ।
ಇದ್ದವನಾತ್ಕ್ರದಿ ಧಗಧಗನೆ ಉರಿವುರಿಯೊಳು ಕಾಷ್ಠ ತಿರುಗಿಸಿದಂತೆ ।
ಅತಿವೇಗದಿಂದ ತಿರುಗುವ ಕಾಷ್ಠಯೆತು ।
ಲಗ್ನವಾಗುವದಿಲ್ಲ ಅಂತು ಅಪ್ರಾಕೃತ ತನ್ನ ।
ಶ್ರೀಭಾಗದಿಂದ ಪೊಪ್ಪುವದು ಸರ್ವವು ನಿನ್ನಾಧೀನ ।
ನಿನ್ನಿಚ್ಛೆ ಬಂದಂತೆ ಸಿರಿ ಅಜ ಭವಾದಿಗಳು ।
ಅನುಸರಿಸಿ ಕೊಂಡಿಪ್ಪರೈ ಗುರು ಪುರಂದರ ವಿಠಲ ॥ ೪ ॥

ತ್ರಿಪುಟ ತಾಳ

ಇಲ್ಲೆಂಥ ಸುಖಗಳುಂಟು ಅಲ್ಲೆಂಥ ಸುಖಗಳುಂಟು ।
ದುಃಖವಿಲ್ಲಲ್ಲಿ ಅಪಾರ ಸುಖ ವುಂಟು ।
ಲೋಕಗಳಲ್ಲಿ ನಾಶವುಂಟು ಅಲ್ಲಿ ದಿನಕೊಂದು ।
ಬಗೆಯಾಡಿ ಯಾಡಿ ಸುಖವಾಗಿ ನಾಶವಿಲ್ಲದ ।
ಅಪ್ರಾಕೃತವಾದ ಸುಖವನನುಭವಿಸುತ್ತ ।
ಕ್ರಮದಿ ತಿರುಗುವ ಅಲ್ಲಿ ತನ್ನತನ್ನಯ ಚಾಮರಗಳಿಂದ ।
ಪೀತಾಂಬರ ಶಂಖ ಚಕ್ರಗಳಿಂದೊಪ್ಪುವ ।
ನಾಶವಿಲ್ಲದ ಪುಷ್ಪವಾಸನೆಯಿಂದ ಲೊಪ್ಪುವ ಗುರು ಪುರಂದರ ವಿಠಲ ॥೫॥

ಅಟ್ಟ ತಾಳ

ಅಲ್ಲಿ ವನಗಳುಂಟು ಅಪ್ರಾಕೃತವಾದ ।
ಫಲ ಪುಷ್ಪಗಳಿಂದ ಲೊಪ್ಪುವದು ।
ಪಕ್ಷಿಜಾತಿಗಳು ಅತಿ ವಿಲಕ್ಷಣವಾದ ಶುಕಗಳು ।
ತಮ್ಮ ಜಾತಿಗಳಲ್ಲಿ ಸಮುದಾಯದಿಂದ ನಾವು ।
ಗಾಯನವನ್ನು ಖಿಲಿಖಿಲಿ ಶಬ್ದದಿಂ ರಚಿಸುವ ನುಡಿಗಳು ।
ಮುಕ್ತರುಬಂದು ಜಲಕ್ರೀಡೆಯಾಡಿ ಕುಳಿಕುಳಿತು ಸುಖಿಪರು ।

ಇಂಥ ಸುಖಬೇಕಾದರೆ ನಿಜಗುಣವಬಿಟ್ಟು ಪರಲೋಕ ।
ಸುಖವೀವ ಗುರು ಪುರಂದರ ವಿಠಲನ ಭಜಿಸುವಾ ॥೬॥

ಏಕ ತಾಳ

ಅಂದು ಗೋಕುಲದಲ್ಲಿ ಗೋಪಾಲರಾದ ।
ಅನಿಮಿಷರು ಸಾರುಪ್ಯವ ಪಡೆದರು ।
ಅಂದು ಗೋವುಗಳಾಗಿ ಸಾಧನವನು ಮಾಡಿ ॥
ಸಾಲೋಕ್ಯವೆಂಬ ಮುಕುತಿಯ ಪಡೆದರು ।
ಅಂದು ನಿನ್ನ ಕೂಡಾಡಿ ಕೆಲಕೆಲರು ॥
ಸಾಮಿಪ್ಯವೆಂಬ ಮುಕುತಿಯ ಪಡೆದರು ।
ಅಂಗಸಾಯುಜ್ಯ ಸರ್ವಾಂಗದಲ್ಲಿ ಅಜಗಿತ್ತೆ ಸಾರಿಷ್ಟಿ ।
ಒಂದೊಂದವಯವಗಳಲ್ಲಿ ತತ್ವಾಭಿಮಾನಿ ।
ದೇವತೆಗಳಿಗೆ ಸಾಯುಜ್ಯ ಪಿತ್ತು ಸಲಹಿದೆ ।
ಅನುಪಮ ಗುಣನಿಧಿಯು ಗುರು ಪುರಂದರ ವಿಠಲ –
ಮುಕುತ ಶಿರೋಮಣಿ ॥೭॥

ಜತ್ತೆ

ಎಂದೆಂದು ಮುಕುತಿಯು ಬೇಕೆಂದವರ್ಗೆ ।
ಅಂದದಿ ಜೀವರ ತಾರತಮ್ಯವ ತಿಳಿದು –
ಗುರುಪುರಂದರ ವಿಠಲ ಮುಕುತಿಯ ನೀವ ॥೮॥

ವಿಜಯ ವಿಠಲ ಕೃತ

## ೨೨ ಮುಕ್ತ ಪ್ರಕರಣ ಸುಳಾದಿ

ರಾಗ ಭೈರವಿ ಧ್ರುವ ತಾಳ

ಮುಕುತಿ ಯಾದವರ ಪ್ರಕರಣವ ತಿಳಿಯಬೇಕು ।
ಭಕುತಿಯಿಂದಲಿ ಭಾವ ಶುದ್ಧನಾಗಿ ।

ಮುಕುತ ರೊಳಗೆ ತಾರತಮ್ಯವೇ ವುಂಟು ಅ ।
ಸಕುತರಾಗಿಪ್ಪರು ಹರಿ ಪದದಿ ।
ಶಕುಲಾತಿ ಮೊದಲಾದ ದೋಷ ರಹಿತ ಗಳಿಲ್ಲ ।
ಅಕಟಕಟ ಯಿವರೀಗ ವಿಲಿಂಗರು ।
ಸಕಲರೊಳಗೆ ಬ್ರಹ್ಮ ವುತ್ತಮ ದೇವತಿ ।
ಅಕಳಂಕ ನಯ್ಯ ಸಂಸಾರ ದಲ್ಲಿ ।
ಪ್ರಕಟ ಜ್ಞಾನವೇಸರಿ ವ್ಯಕ್ತವಾಗವದು ಬಾ ।
ಧಕ ವಿಲ್ಲ ಋಜು ಗಣಸ್ಥ ಜನರಿಗೆ ।
ಮುಕುತಿಲಿ ಯಿರಾಶಾದನ್ಯತ್ರ ಜಗದ್ವಿಷಯ ಜ್ಞಾನ ।
ಶಕಲ ಯಿಲ್ಲದೆ ಅನಾಲೋಚನೆಯಲ್ಲಿ ।
ಲಕುಮಿಗೆ ಸಾಮ್ಯಬಂತು ಯೆನದೀರಿ ಸದಾವಕ್ಕ ।
ಉಕುತಿಯು ಲಾಲಿಸುವದು ಬೊಮ್ಮಗಿಂದಲಿ ಶ್ರೀ ।
ಲಕುಮಿಯು ಜ್ಞಾನ ಯಿರಾಶ ಸರ್ವ ಪದಾರ್ಥದಲ್ಲಿ ।
ಧಕ ವಾಗಿಪ್ಪದು ಯಿರಾಶಕೋಟಿ ಗಣನೆ ।
ವಿಕಸಿತವಾದ ಶ್ರೀಹರಿಯು ಜ್ಞಾನಕ್ಕೆ ಯೆ ।
ಣಿಕೆ ವುಂಟೆ ಆವಾವಕಾಲಕ್ಕ ಗುಣಿಸಿದದರು ।
ಮುಕುತರು ತಮ್ಮತಮ್ಮ ಯೋಗ್ಯತೆ ವುಳ್ಳಸಿತು ।
ಸುಖ ಸಾಂದ್ರರಾಗಿ ಗರುಡ ಶೇಷಾದ್ಯರು ಗುಣ ।
ನಿಕರದಲ್ಲಿ ನಿತ್ಯ ಸರ್ವವು ವದಸರವು ।
ಚಕ್ರಸಾರಿಯ ಯಿಚ್ಛಾವರ್ಕ ಪೊಂದುಂಟು ಯಿವರಿಗೆ ।
ತ್ವಕು ಮೊದಲಾದಿಂದ್ರಿಯಗಳು ಸ್ವರೂಪ ಭೂತ ವೆನ್ನಿ ।
ಬಕುಮಾ ಭರಣ ವಸನ ದಿವ್ಯ ತೇಜೋಮಯರು ।
ಅಖಿಲ ಜೀವರು ವೈಕುಂಠ ಆರಂಭಿಸಿ ।
ತಕತಕ್ಕ ಸ್ಥಾನದಲ್ಲಿ ಯಿಪ್ಪರು ಮೇರುವಿಡಿದು ।
ಮುಕುತಾರ್ಥ ಅಂಶರಹಿತನಾದ ಮುಕ್ತರು ತಾ ।

ಶ್ವೀಕರಾಂತಾತ್ವೀಕರಂತೆ ಸಮರ್ಥರಲ್ಲ ನಾ ।
ಲಕುಮೆಯೊಗ ಮಿಗಿಲಾದ ಅಂತಿ ಅಂಶಗಳೆಲ್ಲ ।
ಪ್ರಕಟವಾಗುವರು ಅನೇಕ ರೂಪಗಳು ಧಾ ।
ರಕರಾಗಿ ನಾನಾ ಕ್ರೀಡೆಯಾಡು ವರಿಚ್ಛೆಯಲ್ಲಿ ।
ಅಕುಟಿಲರಲ್ಲವೆ ಪ್ರೊಬ್ಬರೊಬ್ಬರಿಗೆ ಕು ।
ಹುಕತನವಿಲ್ಲದೆ ಅಧೀನವಾಗಿಪ್ಪರು ।
ಮುಕುತಿದಾಯಕ ನಮ್ಮ ವಿಜಯ ವಿಠ್ಠಲ ನಿಯಾ ।
ಮಕ ಕಾಣೊ ಸರ್ವಜನಕೆ ಅನಂತ ಕಲ್ಪಕ್ಕೆ ॥ ೧ ॥

ಮಟ್ಟ ತಾಳ

ಮೂರೊಂದು ವಿಧದ ಮುಕುತಿಯು ಸಾಲೋಕ್ಯ ।
ಸರುಪ್ಯ ಸಾಮಿಪ್ಯ ಮಾಣಪೆ ಸಾಯುಜ್ಯ ।
ಸಾರಿಷ್ಟಿಯು ವುಂಟು ಇದಿಯು ಪ್ರಭೇದ ।
ವಾರಿಜ ಸಂಭವಗೆ ಹರಿಯು ಸರ್ವಾಂಗದಲಿ ಶ ।
ರೀರ ಧರಿಸಿ ಪೊಂದೊದೆ ಸಾರಿಷ್ಟಿ ।
ಮಾರಾರಿ ಮುಖ್ಯ ತತ್ವೇಶಜನ ।
ದ್ವಾರದಲಿ ತಮ್ಮ ತತ್ವಸ್ಥಾನದಲಿ ।
ಸೇರುವದೆ ಯಿದು ಸಾಯುಜ್ಯ ವೆನಿಸುವದು ।
ಬೇರೆಬೇರಿವರಿಗೆ ಅಂಗ ಸಾಯುಜ್ಯವು ।
ನಾರಾಯಣರೂಪ ವಾಸುದೇವನೊಳಗೆ ಯಿಾ ।
ರೀತಿಯು ವುಂಟು ಧರಣಿಪತಿಯಾದಾ ಪರೀಕ್ಷಿತ ವಿಡಿದು ।
ಸಾರುವೆ ಸಾಮಿಪ್ಯ ವೆಂಬದು ನಾ - ಅಂಶ ।
ವಾರಿತ ಪ್ರತೀಕಾಲಂಬರಿಗೆಯೆನ್ನು ।
ಸಾರುಪ್ಯವೆ ಕೇಳಿ ಅಂಶಗಳಿಲ್ಲದ ।
ಧೀರರಿಗೆ ಸಿದ್ಧ ಋಷಿ ಪಿತ್ರಾದ್ಯರಿಗೆ ।
ಮೇರು ಪರ್ವತದಿಂದ ವೈಕುಂಠ ಪರಿಯಂತ ।

ಚಾರು ಸಾಲೋಕ್ಯಗಳು ಪುರುಷೋತ್ತಮರಿಗೆ ।
ಹಾರವಾಗಿಪ್ಪರು ಯಿವರಿವರೊಳಗೆ ।
ತಾರತಮ್ಯವೆಷ್ಟಿಳಿ ವೈಷಮ್ಯ ಗಳಿಲ್ಲ ।
ಸಾರಭೋಕ್ತ್ರ ನಮ್ಮ ವಿಜಯ ವಿಠಲನ್ನ ।
ಆರಾಧಿಸುವರು ನಿಷ್ಕಾಮಕರಾಗಿ ॥ ೨ ॥

ರೂಪಕ ತಾಳ

ತತ್ವೇಶರಿಗೆ ವುಂಟು ಚತುರವಿಧ ಮುಕ್ತಿ ।
ಮತ್ತೆ ಕ್ರಮದಿಂದಲಿ ಮೂರೆರಡು ವೊಂದು ಮನು ।
ಜೋತ್ತಮರ ತನಕ ಸಿದ್ಧವಾಗಿಪ್ಪುದು ।
ಪತ್ನಿ ವುಳ್ಳವರುಂಟು ವೊಬ್ಬರಿಬ್ಬರು ನೂರು ।
ಹತ್ತುಸಾವಿರ ಅನೇಕ ಮಂದಿಯ ಕೂಡ ।
ಪತ್ನಿ ಯಿಲ್ಲದವರು ಯಿಪ್ಪರು ಯಿವರೊಳಗೆ ।
ನಿತ್ಯಬ್ರಹ್ಮಚಾರಿ ಸ್ವೇಚ್ಛೆ ಕಾಮುಕರು ।
ಇಧ್ಧಂಡದವರೆನ್ನಿ ಯಿಚ್ಛೆ ಐಶ್ವರು ಯೆಲ್ಲ ।
ಎತ್ತನೋಡಿದರತ್ತ ಆನಂದ ಭರಿತದಲ್ಲಿ ।
ಸುತ್ತುವರು ವೊಂದೊಂದು ಸ್ಥಾನ ನಿರ್ದೇಶದಲ್ಲಿ ।
ಉತ್ತಮ ಸಾ - ಆಂಶ ಜನರು ಸಂಚರಿ ।
ಸುತ್ತಲಿಪ್ಪರು ಬಹುರೂಪಂಗಳು ಧರಿಸಿ ।
ತಥ್ಥಳಿಸುವ ಮೂಲ ಸ್ವರೂಪ ದೇಹದಲ್ಲಿ ।
ತತ್ವೇಶರಿಗೆ ಯಿವೆ ಅಂಶಗಳುಂಟು ।
ಪ್ರತ್ಯೇಕವಾಗಿ ಯೆಲ್ಲರ ತಕ್ಕವೆ ವಲ್ಲ ।
ಅನಿತ್ಯವೆನಿಸುವವು ಯಿವರ ಅಂಶ ರೂಪ ।
ಸತ್ಯಸಂಕಲ್ಪ ಶ್ರೀವಿಜಯ ವಿಠ್ಠಲ ರೇಯನ ।
ನಿತ್ಯ ಅಂಶಿ ಅಂಶ ರೂಪಗಳಿನ್ನು ॥ ೩ ॥

ಝಂಪಿ ತಾಳ

ಮನುಜ ಗಂಧರ್ವ ಮೊದಲಾದ ನಿರಂತರಿಗೆ |
ಚಿನು ಶರೀರಾದಿ ಚತುರ ಮುಕ್ತಿ ಯುಂಟು |
ಗುಣವರ್ಗ ವುಳ್ಳಂಥ ವುತ್ತರೋತ್ತರ ಜನಕೆ |
ಘನ ಅಂಶಾಂಶಗಳಿಂದ ವ್ಯಕ್ತ್ಯವೈಯ್ಯಾ |
ವನಜ ಭವ ಮೊದಲಾದ ಮುಕ್ತರು ನಿಯಾಮಕರು |
ಅನುದಿನ ತವತವಗಿಂದ ನೀಚರಿಗೆ |
ತನುವಿನೊಳಗಲ್ಲದೆ ಬಾಹಿರದಿ ಯಿನಸಲ್ಲ |
ಅನಿಲನೇ ಮೋಕ್ಷದಲಿ ಬ್ರಹ್ಮದೇವಾ |
ತ್ರಿಣಿನೇತ್ರ ಸತಿವಿಡಿದು ಚತುರಾನನ ತನಕ |
ಗುಣ ಕ್ಲಿಪ್ತ ಗಣನೆ ಅಧಿಕಾಧಿಕವಾಗಿ |
ಎಣಿಸು ಯಿವರೊಳಗೆ ವೈಚಿತ್ರವುಂಟು ಯಿದೆ |
ಎನಿಸುವದು ಸಜಾತಿನಾಮದಲಿ |
ಮಿನಗುವವು ವಿಜಾತಿ ವುಳ್ಳವನಂತವಾಗಿ |
ಅನಿರುಪನಾಥನಿಂದಿತ್ತ ಬ್ಯಾರೆ |
ಎಣಿಕೆ ಮಾಡಲು ಸಲ್ಲ ಯಿದ್ದ ಪರಿಮಿತವೆನ್ನಿ |
ಅನುಕೂಲವಾಗಿ ಸುಖದಲಿ ಯಿಪ್ಪರು |
ಮಣಿಮಯ ನಿಕೇತನ ವಿಜಯ ವಿಠಲ ನಂಘ್ರಿ |
ನೆನಿಸಿ ಪುಳಕೋತ್ಸವದಲಿ ಪೂರ್ಣ ಯೋಗ್ಯತ ಭಕ್ತಿ ॥ ೪ ॥

ತಾಳ ತ್ರಿವಿಡಿ

ಸತ್ವಗುಣವರಾತಿ ವೈಕುಂಠ ಪುರದಲಿ ॥
ನಿತ್ಯವಾಗಿಪ್ಪದು ಅಮಿಶ್ರತನದಲಿ |
ಚಿತ್ರವಾದ ಜಗಕೆ ಕಾರಣ ವಾಗದು |
ಸತ್ಯಕಾಮುಕರಿಂದ ಕಾಲ ವ್ಯವಧಾನದಿ |
ಸತ್ಯಲೋಕಾಧೀಶ ವುಳಿದ ಮುಕ್ತರಿಗೆಲ್ಲ |

ಅತ್ಯಂತವಾಗಿ ಕ್ರೀಡೆಗೆ ಸಾಧನವಯ್ಯಾ ।
ಮತ್ತಮಾತಂಗ ಶಂದನ ವಾಜಿದಳಂಗಣ ।
ಭೃತ್ಯವರ್ಗರು ತಮಗೆ ಬೇಕಾದುದೆ ಮಾಡಿ ।
ಮತ್ತೆ ತಮ್ಮ ಅಂಶ ಅದರೊಳು ಹೊಗಿಸಿ ನ ।
ಗುತ್ತ ಸಂಚರಿಸುವರು ಸ್ವಕ್ರೀಡೆಯಲಿ ನಾನಾ ।
ಚಿತ್ರರೊಪ್ಪುವಾಭರಣ ಧರಿಸುವರದೆ ಗುಣದಿ ।
ಸತ್ತಿಗೆ ಚಾಮರಾ ಛತ್ರ ಪರಿಪರಿಯು ।
ಮತ್ತೆ ವಾಲಗದಲ್ಲಿಗೆ ಸರ್ವವು ತಾವಾಗಿ ।
ಸುತ್ತುತಲಿಪ್ಪರು ಬಿಡದೆ ಯೇನೇನು ಅ ।
ವರ್ತಿಲಿ ತಮತಮ್ಮ ಮರ್ಯಾದೆ ವಿಾರದೆ ।
ಬಿತ್ತರಿಸಿ ಕೇಳಿ ಯಿಂಥವಿರವಿನ ।
ಉತ್ತಮ ಜನಕೆ ಅವರು ಸೇವೆ ಮಾಳ್ಪರು ।
ಎತ್ತ ನೋಡಲು ಯಿವರ ಹೆಂಡರು ತಮತಮ್ಮ ।
ಭರ್ತರ ಅನುಸರಿಸಿ ಆಡುವರು ಮುಕ್ಕಳೊಡನೆ ।
ಈತೆರದಲಿ ನಲಿದು ಗುಣ ಸತ್ವವನೆಬಿಟ್ಟು ।
ಚಿತ್ತನಿಂದಲಿ ಕ್ರೀಡೆ ಅದರಂತೆ ಆಡುವರು ।
ಚಿತ್ತಜನಯ್ಯಗೆ ದ್ವಿವಿಧವಲ್ಲಿ ಸೇವೆ ॥
ಸುತ್ತ ಉತ್ಸಹದಲ್ಲಿ ಯಿರುತಿಪ್ಪರ್ಯೆ ।
ಅತ್ಯಣುಜೀವಿಗೆ ಯಿಂಥವೆಲ್ಲಯಿಂಬಿಯಾ ।
ಉತ್ತಮ ಶ್ಲೋಕನ್ನ ಶಕ್ತಿಯಿನ್ನಿ ।
ಸತ್ವದಗುಣರಾಶಿ ಅಂಶಪ್ರುಕ್ಷವರು ತಾ ।
ರತ್ತಮ್ಯದಿಂದದಲಿ ತೆಗೆದುಕೊಂಡು ಇ ।
ರುತಿಪ್ಪರಲ್ಲದೆ ನಿರಂಪ ಮುಕ್ತರಿಗೆ ।
ಸ್ವತಂತ್ರಯಿಲ್ಲವು ಯಿವರಿಗಲ್ಲ ।
ಪ್ರತ್ಯೇಕ ರೂಪದಿ ಆಡತಕ್ಕವರಲ್ಲ ।
ಎತ್ತಪೋದರು ತಮ್ಮ ಸ್ವಶರೀರ ।

ಪೊತ್ತು ಪೋಗಾಡುವರು ಪ್ರೇಮದಿಂದಲಿ ಕ್ರಮ. ದಿ
ಪೊತ್ತಿದ್ದು ಬಿಸಟು ಬ್ಯಾಸರದಲೆ ಬಂದು ।
ತತ್ವಸ್ಥಾನದಲಿ ಯಿದ್ದು ಶ್ರೀಹರಿ ಮಹಿಮೆ ।
ಉತ್ತಮ ಗುಣದಿಂದ ಲಾಲಿಸುವರು ।
ಎತ್ತನೋಡಿದರತ್ತ ಮುಕ್ತರ ಸಭೆ ವುಂಟು ।
ರತ್ನಮುತ್ತುಗಳಿಂದ ಶೋಭಿಸುತಿದಕೊ ।
ಹತ್ತಿಲಿ ವನಕೂಪ ವಾಪಿಸರೋವರ ॥
ತಥ್ಥೈಸುವ ದೇವ ಮುನಿಗಳೀರೆ ।
ಕೀರ್ತನೆ ಪೊಗಳಿಕೆ ಕೀರ್ತಿಯು ಪತಾಕು ।
ನೃತ್ಯಾದಿ ಶಾಸ್ತ್ರ ಪೌರಾಣ ಪುಣ್ಯ ಕಥೆ ।
ಶ್ರುತ್ಯರ್ಥಪೇಳುವ ಸಂದಣಿ ಯಿಂದಲಿ ।
ಸೋತ್ತಮರು ಮಾಲಗದಲ್ಲಿಪೊಸ್ಪೆ ।
ಹತ್ತೈವತ್ತು ನೂರೆ ಸಾವಿರ ಲಕ್ಷವೆ ।
ಹತ್ತುಕೋಟಿಗಳೆ ನಿರ್ಬುದವೆ ಗುಣಿಸಿ ।
ಉತ್ತರ ಪೇಳ್ವೆನೆಂಬುವನಾರು ಸಭೆಗಳ ।
ತುತ್ತಿಸಿ ಕಡೆಯಾಗಿ ಅನಂತ ಕಲ್ಪಕ್ಕೆ ।
ವೃತ್ತಿ ರೂಪದಲ್ಲಿದ್ದ ಸಂಸ್ಕೃತಿ ಅನುಭವದ ।
ವೃತ್ತಾಂತ ನೆನಿಸುವರಲ್ಲಿ ಪೊಂದು ನಿ ।
ಮಿತ್ಯ ಗೋಸುಗವಾಗಿ ಕರ್ಮಗಳೆ ಯಿಲ್ಲವೊ ।
ಕರ್ತನಾಗಿಯಿದ್ದ ಜೀವರ ಸ್ವಭಾವ ।
ಅರ್ತರಹಿತರಲ್ಲಿ ಹರಿಯು ಪೂಜಿಸುವದು ।
ಯುತ್ನ ಜ್ಞಾನ ಯಿಚ್ಛೆ ಅನಾದಿ ಸಿದ್ಧವೊ ।
ತತ್ತ್ವೇಶ ಮುಂತಾದ ತೃಣ ಜೀವಕೆ ।
ಹತ್ತವತಾರದ ವಿಜಯ ವಿಠಲ ರೇಯನ ।
ತೆತ್ತಿಗರಾನಂದಕ್ಕೆ ವೃದ್ಧಿಹ್ರಾಸಗಳಕ್ಕ ॥ ೫ ॥

ಅಟ್ಟ ತಾಳ

ಇವರಿಗೆ ವುಶ್ಪತ್ತಿ ಸ್ಥಿತಿ ಲಯ ವೆಂಬೋಸು ।
ಅವಿಕಾರತನದಲ್ಲಿ ಯಿಪ್ಪದು ಸೃಷ್ಟಿಯಾ ।
ಗುವಕಾಲದಲಿ ಪರಮಾತ್ಮನಿಂದಲಿ ವು ।
ದ್ಭವಿಸದೆ ವುತ್ಪತ್ತಿ ಮಧ್ಯಕಾಲವೆ ಸ್ಥಿತಿ ।
ತವಕದಿಂದಲಿ ಮಹಾ ಪ್ರಳಯಕ್ಕೆ ಪ್ರಾಪ್ತಾನಂ ।
ದವೆ ಯಿಲ್ಲದಿಪ್ಪದು ಲಯ ಮುಕ್ತರಿಗೆ ಕ್ಲಿಪ್ತಾನಂ ।
ದವೆ ವುಳ್ಳಾನಂದದಲಿ ಧ್ಯಾನ ಮಾಳ್ಪದೆ ಸುಪ್ತಿ ।
ಇವರೊಳು ಬಗೆವುಂಟು ಮುಕ್ತಬ್ರಹ್ಮಗೆ ಮಾತ್ರ ।
ದ್ವಿವಿಧ ಪೇಳೋದಲ್ಲ ಮುಖ್ಯಾನಂದವೆ ಸತ್ಯ ।
ಶಿವನೆ ಶೇಷನು ಯೆನ್ನು ತತ್ವತತ್ವದ ಕಾಮಾ ।
ದಿವಿಜಾದಿಗಳುಂಟು ಯೋಸಂಬೆನಾಶ್ಚರ್ಯ ।
ಪ್ರವರ್ತಿ ಮಾರ್ಗಗಳಿಲ್ಲ ಪ್ರಕೃತಿ ಬದ್ಧಗಳಿಲ್ಲ ।
ಕವಲ ಬುದ್ಧಿಗಳಿಲ್ಲ ಕಠಿಣೋಕ್ತಿಗಳಿಲ್ಲ ।
ಅವಿಶ್ವಾಸಗಳಿಲ್ಲ ಅವಕ್ರಿಯಗಳು ಯಿಲ್ಲ ।
ಆಶಾಪಾಶಗಳು ಯಿಲ್ಲ ಅನ್ಯಾಪೇಕ್ಷಿಗಳು ಯಿಲ್ಲ ।
ಅವನಿಯೊಳಗೆ ವುಳ್ಳ ಅಪಾವ ಬಗೆ ಯಿಪ್ಪ ।
ಅವಗುಣಂಗಳೆ ಯಿಲ್ಲ ಅನ್ಯಾಪೇಕ್ಷಿಗಳು ಯಿಲ್ಲ ।
ಭವದೂರ ವಿಜಯ ವಿಠಲ ರೇಯನ ಪಾದಾ ।
ನಿವರ್ತಿಮಾರ್ಗದಲಿಂದ ಭಜಿಸಿಯ್ಯೆದಿದರು ಮುಕ್ತಿ ॥೬॥

ಆದಿ ತಾಳ

ಜಾತಿ ಭೇದಗಳಕ್ಕು ವರ್ಣ ಭೇದಗಳಕ್ಕು ॥
ಖ್ಯಾತನಾಖ್ಯಾತರು ತುಂಬಿಕೊಂಡಿಪ್ಪರು ।
ರೇತೋತ್ಸರ್ಜನೆ ಮೂತ್ರ ಮಲ ದೋಷಗಳಿಲ್ಲ ।
ನೀತ ಅನೀತರು ಆನಂದೋದ್ರೇಕ ಭಗ ।

ವಸ್ಪ್ರೀತಿ ಗೋಸಗ ವೆಂದು ಚಿಂತಿಸುವರು ಬಾಗಿ।
ಸ್ವೋತ್ತಮರಿಗೆ ನೀಚ ಮುಕ್ತರ ಸೇವೆ ಬಗೆಯು।
ಮಾತಿನಿಂದಲಿ ಯೆಲ್ಲಾ ಅಂಶರೂಪವೆ ವ್ಯಕ್ತಿ।
ಶಾತಕುಂಭ ರಜತ ಪಚ್ಛೆ ಪವಳರತ್ನ।
ಜಾತಿ ಮುತ್ತುಗಳಿಂದ ತೆತ್ತಿಸಿದ ನಾನಾ ಭರಣ।
ಜ್ಯೋತಿ ಪರಿಮಳಗಂಧ ಮಿಗಿಲಾದ ಭೋಗದ್ರವ್ಯಾ।
ಶ್ವೇತ ಛತ್ತ್ರ ಹಸ್ತಿ ರಥ ವಾಜಿ ಪರಿವಾರ।
ಈತೆರದಲಿ ಅವರ ಪ್ರೀತಿ ಬಡಿಸಿ ತಮ್ಮ।
ಗಾತುರದೊಳು ಬಂದು ಅಂಶಗಳು ಕೂಡೋವು।
ಚಾತುರ್ಯ ವೊಂದು ಕೇಳಿ ಅಂತಿ ವಿಭಕ್ತವಾಗೆ।
ಭೌತಿಕ ದಂತೆ ಜೀವಕೆ ಛೇದ್ಯ ಭೇದ್ಯಗಳಿಲ್ಲ।
ತಾತಿರುಗಿ ಅಂಶ ಬಂದು ಕೂಡಿದರೆ ಪೂರ್ಣ।
ಚೇತನಕೆ ವುಂಟು ಯಿಲ್ಲದೆ ಅಪೂರ್ಣ।
ಯಾತಕ್ಕೆ ಸಂಶಯವೋ ಅನಂತಾನಂತ ಕಲ್ಪದ।
ಆತುಮ ಭೂಸುರರು ನಿಬಿಡಿಯಾಗಿಪ್ಪರು।
ಯಾತರ ಪೇಳಿಕೆ ಯಿದಕಿಂತ ವೊಂದೊಂದು।
ಕೌತುಕ ಲೀಲೆವುಂಟು ನೂತನ।
ನೂತನಾಂಗ ವಿಜಯ ವಿಠಲ ದೇಯ।
ಭೀತಿಯ ಬಿಡಿಸಿದ ತನ್ನವನೆಂದವಗೆ ॥ ೭ ॥

ಜತೆ

ನಿರ್ದುಃಖದಲಿ ಸಮರು ಸರ್ವ ಜೀವಿಗಳೆನ್ನು।
ದುರ್ಧರುಷ ವಿಜಯ ವಿಠಲ ಗತಿ ಪ್ರದಾತಾ ॥ ೮ ॥

ಶ್ರೀ ಗುರು ಮಧ್ವೇಶಾ ರ್ಪಣಮಸ್ತು

ಶ್ರೀ ಗೋಪಾಲ ವಿಠ್ಠಲ ವಿರಚಿತ

## ೨೩ ಮುಕ್ತ ಪ್ರಕರಣ ತಾರತಮ್ಯ ಸುಳಾದಿ

### ರಾಗ ಭೈರವಿ ಧ್ರುವ ತಾಳ

ಮುಕ್ತರ ಸ್ಥಿತಿಯನು ವರ್ಣಿಸಿ ಪೇಳುವದಕ್ಕೆ ।
ಶಕ್ತರಾರಿನ್ನು ಯೆನ್ನ ಶಕ್ತ್ಯಾನುಸಾರ ಪೇಳ್ವೆ ।
ಉತ್ತಮ ಮಧ್ಯಮ ಅಧಮ ತರತಮ್ಯದಿಂದ ಜೀವ ।
ಮುಕ್ತಿಲಿ ಯಿಪ್ಪವರು ಬಿಡದೆಂದೆಂದು ।
ಮತ್ತೆ ತ್ರಿಗುಣಾತ್ಮಕ ಲಿಂಗ ರಹಿತರಾಗಿ ।
ಚಿತ್ ಸ್ವರೂಪ ದಿಂದಲೆ ಸಂಚರಿಸುತ್ತ ।
ಮತ್ತೆ ಸಾಕಾರ ಸರ್ವ ಅಂಗಾಭರಣ ಭೂಷಿತ ।
ವಸ್ತ್ರಮಾಲಿಕೆ ಗಂಧ ಪರಿಮಳದಿ ॥
ಎತ್ತ ಪಿಡಿವ ಶಂಖ ಚಕ್ರಾಯುಧ ಧರಿಸಿ ।
ನಿತ್ಯ ಆನಂದ ಅನುಭೋಗಿಸುತ್ತ ।
ಅತ್ಯಂತಾ ಭೇದವೆಲ್ಲ ಸ್ವರೂಪ ಭೂತವಿನ್ನು ।
ಎತ್ತಲಾದರು ನಿತ್ಯವೆಂಬದಿಲ್ಲ ।
ನಿತ್ಯ ಸೇವಿಯು ತಮಗಿಂದುತ್ತಮ ರಾದವರಿಗೆ ।
ಛತ್ರ ಚಾಮರ ನಾನಾ ಮಹಂತಾವದು ।
ಭೃತ್ಯ ಕೆಲಸಕಿನ್ನು ಕೈಜೋಡಿಸಿಕೊಂಡು ।
ಜತ್ತಾಗಿನಿಂತಿಪ್ಪರು ಕೆಡಕಿಲ್ಲಿದೇ ।
ಚಿತ್ತ ಶುದ್ಧಿಯೆಲ್ಲ ಚಂಚಲೀರಪುಗಳಿಲ್ಲ ।
ಮತ್ತೆ ಕವಲ ಬುದ್ಧಿ ಮಾಂದ್ಯವಿಲ್ಲ ।
ಪತ್ನಿ ವುಳ್ಳವರು ಕೆಲರು ಪತ್ನಿ ರಹಿತರು ಕೆಲರು ।
ಅತ್ಯಂತ ಸುಖಿಗಳು ಅನ್ಯಾಪೇಕ್ಷವಿಲ್ಲ ।

ಪಕ್ಷಿ ವುಳ್ಳವರು ತವ್ಮ ಶಕ್ತಿಯಿಂದಲಿ ಕ್ರೀಡೆ ।
ನಿತ್ಯ ಮಾಳ್ಪರು ನೀತವಾಗಿ ಯಿನ್ನು ।
ಪಕ್ಷಿರಹಿತರಾದವರು ಅತ್ಯಂತ ಸ್ವರೂಪ ।
ಚಿತ್ತದಿಂದೇವೆ ತಜ್ಞನ್ಯ ಸುಖ ।
ಮತ್ತೆ ಆಗದು ರೀತೋಸ್ಪಲನೆ ಮುಕ್ತರಿಗೆ ಅಭಿ ।
ವ್ಯಕ್ತ ತಜ್ಞನ್ಯಾನಂದ ಚಿತ್ತಿನೊಳಗೆ ।
ನಿತ್ಯವೊದಗಿಸುವಾನಂದ ಗೋಪಾಲ ವಿಠಲ ।
ಉತ್ತಮ ಪುರುಷ ಬಿಂಬನಾಗಿಯಿದ್ದು ॥ ೧ ॥

ಮಟ್ಟ ತಾಳ

ಉದರ ಹಸಿವಿ ಯಿಲ್ಲ ಮೆದುವರು ಫಲಗಳು ।
ಒದಗೋದು ತಜ್ಞನ್ಯ ಆನಂದವು ವೊಳಗೆ ।
ಮಧು ಫಲಾದಿಗಳು ಮೆದುವ ಮನಸಿಲ್ಲ ।
ಮುದದಿ ತಾವಿದ್ದಲ್ಲಿ ಬಂದು ಸೇರುವವು ।
ಉದಕ ಕುಡುವರಿಗೆ ವೊಂದೆರಡಿನಸಲ್ಲ ।
ಕ್ಷುಧಿಪಿಪಾಸ ನಿದ್ರಾ ದಶ ಯಿಂದ್ರಿಯಗಳಿಂದ ।
ಒದಗಿ ಬಾಹುವ ಸುಖವೆಲ್ಲ ಆನಂದವು ।
ವಿಧಿಸಿ ಜೀವನಿಗೆ ಸ್ವರೂಪ ದೊಳಗೆ ।
ಒದಗಿ ಯಿಪ್ಪುದದೆಲ್ಲ ಯೆಲ್ಲ ಅಭೇದವಾಗಿ ।
ವಿಧಿಸಿ ಹೀಗೆ ವೊಂದೇ ಜೀವಕೆ ಯೆನಸಲ್ಲ ।
ವಿಧಿ ಆದಿ ತೃಣಾಂತ ಯೆಲ್ಲ ಜೀವನಕೆ ಹೀಗೆ ।
ಮದನನಯ್ಯ ಚಲುವ ಗೋಪಾಲ ವಿಠ್ಠಲ್ಲ ।
ಒದಗಿಸುವಾನಂದಾ ತರತಮ್ಯದಿಂದ ॥ ೨ ॥

ರೂಪಕ ತಾಳ

ಚಿತ್ತಿನಿಂದಲೆ ಹೀಗೆ ಭೋಗ ಬಡುವರು ಸತತ ।
ಮತ್ತೆ ಶುದ್ಧ ತತ್ವದಿಂದ ಕ್ರೀಡೆ ।

ನಿತ್ಯ ತಮ್ಮಿಂದಲಿ ಭಿನ್ನವಾದುದರಿಂದ ।
ಅರ್ಥಿಬಡುವರು ನಾನಾ ರೂಪ ತೆಗೆದುಕೊಂಡು ।
ಹಸ್ತಿ ತುರಗ ನಾನಾ ವಸ್ತ್ರ ವಾಹನಗಳು ।
ಮತ್ತೆ ಆಗುವರು ಮಹಮಹ ವಿಚಿತ್ರ ।
ವರ್ತಮಾನವೆ ಕೇಳಿ ಯಿದರೊಳಗಿನ್ನು ವಿ ।
ಚಿತ್ರ ವಾಗುವದುಂಟು ಜೀವರ ಸ್ಥಿತಿಗಳು ।
ಉತ್ತುಮ ಸಾಅಂಶ ಜೀವರು ಯಿಲ್ಲಿಲ್ಲ ।
ಪ್ರತ್ಯೇಕ ಕಾಲದಿ ತಮ್ಮ ಅಂಶಗಳಿಂದ ।
ಸತ್ವ ಪ್ರಕೃತಿ ಗೊಂಡು ಚಿತ್ತ ಬಂದಂತೆ ತಾವು ।
ಹತ್ತೆಂಟು ಯಿಪ್ಪತ್ತು ನೂರಾರು ಸಾಸಿರು ।
ಮತ್ತೆ ನಾನಾ ರೂಪ ಛತ್ರ ಚಾಮರ ಸರ್ವ ।
ವಸ್ತ್ರಾಭರಣ ಫಲ ಪುಷ್ಪ ಗಂಧ ಮಾಲೆ ।
ಹತ್ತೆಂಟು ಪರಿ ವಾಹನರಾಗಿ ತವಗಿಂದ ।
ಉತ್ತಮರಾದವರ ಹೊತ್ತಾಡುವರು ಕ್ರೀಡಾ ।
ಮತ್ತೆ ಯಿಸಾ ಪರಿ ಹರಿಯು ಸೇವಿಸಿ ಪುನಹ ।
ಮತ್ತೆ ತಮ್ಮ ಸ್ವರೂಪ ಚಿತ್ತನೊಳು ಕೂಡುವರು ।
ಆಶ್ಚರ್ಯಯಾಸವು ಸಲ್ಲ ಯೆಲ್ಲ ಸುಲಭವು ನೋಡಿ ।
ತುತ್ತು ಮಾಡಿದಂತೆ ಯೆಲ್ಲ ನೋಡಿ ।
ಬತ್ತಿಯಿಂದಲಿ ಜೋತಿ ಬತ್ತಿಗಚ್ಚಿದಂತೆ ।
ವ್ಯಕ್ತವೆಲ್ಲವು ಅವರ ಸಾಧನಗಳು ।
ಇತ್ತ ಕೇಳಿನ್ನು ನಿರಂಶ ಜೀವರ ಗತಿಯು ।
ಪ್ರತ್ಯೇಕ ವೊಂದೊಂದೆ ಅಂಶದಿಂದ ।
ಸತ್ವ ಪ್ರಕೃತಿಗೊಂಡು ವೊಂದೊಂದೆ ರೂಪದಿ ।
ಮತ್ತೆ ಸೇವಿಸುವರು ಸಿರಿ ಹರಿಯು ।
ಎತ್ತನೋಡಿದರು ಬಲುರೂಪವಾಗುವ ಶಕ್ತಿ ।

ಮತ್ತಿಲ್ಲ ನಿರಂಶ ಜೀವರಿಗೆ ।
ಮುಕ್ತರೊಳಗಿರುತಿಪ್ಪ ಗೋಪಾಲ ವಿಠಲನ್ನ ।
ಭಕ್ತರಾನಂದ ಬಲ್ಲವರು ಯಾರೊ ॥ ೩ ॥

ಝಂಪಿ ತಾಳ

ಜ್ಞಾನಭಕ್ತಿ ವಿರಕ್ತಿ ಮೂರು ಮುಕುತರಿಗೆ ।
ನ್ಯೂನವಿಲ್ಲವು ನೋಡು ವೊಂದು ಕ್ಷಣವಾದರು ।
ಜ್ಞಾನಕ್ಕೆ ಯೆಲ್ಲವೂ ಕಾಣಿಸುವದೆ ಫಲವು ।
ಏನುಬೇಡಿದ್ದು ವೊದಗುವದೆ ಭಕ್ತಿಯ ಫಲ ।
ಕಾಣದೆ ಆಧಿಕ್ಯ ಯಿಚ್ಛ್ಯಸದಿಪ್ಪುವದೆ ।
ತಾಸು ವಿರಕ್ತಿ ಯೆಂಬದು ಯಿದೇವೆ ।
ಆನಂದಮಯವೆಲ್ಲ ಆಡುವ ವಚನಗಳು ।
ಯೋನಿ ಯೆಂಭತ್ತು ನಾಲ್ಕು ಲಕ್ಷ ಜೀವರುಗಳು ।
ಗೇಣು ವೊಳವೂಯಿಲ್ಲ ಯಿಲ್ಲ ಅಣುರೂಪವು ।
ತಾನು ಕಿರಿದು ಯೆಂಬ ಕ್ಲೇಶವಿಲ್ಲ ।
ನಾನಾ ಜೀವರು ಪರಸ್ಪರ ವಿರೋಧಿಗಳಿಲ್ಲ ।
ಆನೆ ಸಿಂಹಗೆ ಅಲ್ಲಿ ವೈರವಿಲ್ಲ ।
ಹೇನು ವೃಶ್ಚಿಕಗಳು ಮೇಲೆ ವೋಡಾಡಿದರು ।
ಆನಂದಮಯವೆಲ್ಲ ಅವುಗಳನ್ನು ।
ಕಾಣರೆಂಬದು ಯಿಲ್ಲ ಹರಿಯನ್ನು ಸರ್ವರು ।
ತಾನು ಸಂಪಳಿಯೆಂಬ ಚಿಂತೆಯಿಲ್ಲ ।
ಕಾಣಿಸುವ ಹರಿತಾನು ಅವರವರ ಯೋಗ್ಯತೆ ।
ಯೂನುಸಾರವಾಗಿ ತೋರುತಲಿ ಯಿನ್ನು ।
ಧ್ಯಾನ ವೆಂಬದುಯಿಲ್ಲ ತಮ್ಮ ಸ್ವರೂಪದಿ ।
ಧೇನಿಪರು ತಮಗಿಂತ ವುತ್ತುಮರ ಅನೇಕವಾಗಿ ।
ಧ್ಯಾನವ ಮಾಳ್ಪವರು ಹರಿಯಾ ।

ತಾನು ದಿನದಿನ ನೂತನವಾಗಿ ಯಿಪ್ಪ ।
ಆನಂದಮಯ ಮೂರ್ತಿ (ಪೂರ್ಣ) ಗೋಪಾಲ ವಿಠಲನ್ನ ।
ಕಾಣುವರು ಪ್ರತಿಕ್ಷಣದಿ ಕೆಡಕಿಲ್ಲದೆ । ॥೪॥

ತ್ರಿವಿಡಿ ತಾಳ

೧. ಸೃಷ್ಟ್ಯಾದಿ ಅಷ್ಟ ಕರ್ತೃತ್ವ ಜೀವ ಸ್ವರೂಪಕ್ಕೆ ।
ಘಟ್ಟಿಯಾಗಿಪ್ಪವು ಯೆಂದೆಂದಿಗೂ ಬಿಡದೆ ।
ಪುಟ್ಟಿಸಿ ಕೊಡುವ ಪ್ರತಿ ಕ್ಷಣಕೆ ಆನಂದ ಹರಿ ।
ಸೃಷ್ಟಿದಿ ಅಭಿವ್ಯಕ್ತಿ ಸೃಷ್ಟಿ ನೋಡು ।
೨. ಬಿಟ್ಟು ಜೀವನ ನೆಂದು ಪೋಗದೆ ಯಿಪ್ಪುವದೆ ।
ಘಟ್ಟಿಯಾಗಿ ಯಿದೇ ಪಾಲಣಿಯೋ ।
೩. ನಷ್ಟಮಾಡಿ ಜಗಪ ಮುಕ್ತಾಮುಕ್ತ ಜೀವಾ ।
ಪೊಟ್ಟೆಯೊಳಗೆ ಯಿಪ್ಪುವದೆ ಲಯವು ನೋಡು ।
೪. ಅಷ್ಟು ಕಾರ್ಯಕೆ ಜೀವವೆ ದಡುಕುವದಿನ್ನು ।
ಘಟ್ಟಿಯಾಗಿದೆ ಹರಿ ನೇಮನ ಕಾಣೋ ।
೫. ನಷ್ಟ ವಾಗದೆ ಜೀವಾ ನಿಜವಾಗಿ ಯಿಪ್ಪುವದೆ ।
ಘಟ್ಯಾಗಿ ಜ್ಞಾನ ಹರಿ ಕೊಟ್ಟದ್ದೆನ್ನಿ ।
೬. ಸ್ಪಷ್ಟಾಗಿ ತನಗಿಂದ ಉತ್ತಮರ ಗುಣಗಳು ।
ಘಟ್ಯಾಗಿ ತಿಳಿಯುದೆ ಅಜ್ಞಾನವೂ ।
೭. ಕಟ್ಟುಮಾಡಿ ಅಧಿಕ ಆನಂದ ಕೊಡದಿಚ್ಛಾ ।
ವರ್ಣ ಮಾಡಿಪ್ಪುದೆ ಬಂಧಕ ಕಾಣೊ ।
೮. ಪುಟ್ಟಲೀಸದೆ ಪುನಹ ಸಂಸಾರ ಬಿಡಿಸಿದ್ದೆ ।
ಘಟ್ಟಿಯಾಗಿ ಯಿದೇ ಮೋಕ್ಷಕಾಣೊ ।
ಅಷ್ಟ ಕರ್ತೃತ್ವವು ಸ್ವರೂಪ ದೊಳಗಾಗಿ ।
ಘಟ್ಯಾಗಿ ನಿಂತು ಮಾಡಿಸಲು ।
ಯಿಷ್ಟರಿಂದಲ್ಲಿ ಜೀವಾ ಮುಕ್ತರುಗಳಾನಂದ ।

ಸೃಷ್ಟ್ಯಾದಿ ಹರಿಯು ಅಭಿವ್ಯಕ್ತಿಮಾಳ್ಪ ।
ಇಷ್ಟಮೂರುತಿ ರಂಗ ಗೋಪಾಲ ವಿಠಲನು ।
ಘಟ್ಟಿಯಾಗಿ [illegible] ರೂಪನಾಡುವಾ ॥ ೫ ॥

ಅಟ್ಟತಾಳ

ವರ್ಣಾಶ್ರಮಗಳುಂಟು ವರಣ ಬಾಹ್ಯರು ವುಂಟು ।
ಪರಿಪರಿ ಸ್ಥಾವರ ಜೀವರು ಗಳುಂಟು ।
ಇರುವರು ಯಿದ್ದಲ್ಲೆ ಸ್ಥಾವರ ಜೀವರು ।
ತಿರುಗಿ ಆಡುವರಲ್ಲ ಯಿದ್ದಲ್ಲೆ ಆನಂದಾ ।
ಹರುಷ ಬಡುವರಿನ್ನು ಸ್ವರೂಪ ದಿಂದಲ್ಲೆ ।
ತರತಮ್ಯ ಜೀವರು ಅಲ್ಲಿವುಂಟು ।
ಪರಿಪರಿ ಶುದ್ಧ ಸತ್ವಗಳನೆ ಕೊಂಡು ।
ಮರಗಳು ನಾನಾ (ಕುಲದ) ಲತೆಯ ರೂಪವಾಗಿ ।
ಪರಿವಾರ ಸುರರಿಂದ ಬೆರದು ಹರಿಯುತಾನು ।
ಹೊರಗೆ ಪೊರಟು ತಾನು ಸಂಚರಿಸುತ್ತ ।
ಸಿರಿಯಿಂದ ಸುರುಗಳಿಂದಾ ಡೋಲ ಪರಿಕ್ರೀಡಿಗನುಕೂಲ ।
ಪರಿಪರಿ ಪುಷ್ಪಗಳು ಫಲವು ರಸ ಗಂಧವು ।
ಹರಿಯಕ್ರೀಡಿಗೆ ಅನುಕೂಲರಾಗಿ ನಾನಾ ಕುಸುಮ ।
ಸಿರಿ ತುಲಸೀ ಮುಂತಾದ ಮರಗಳು ಆಗಿ ।
ಹರಿಯು ಸೇವಿಸಿ ಪುನಹ ಯಿರುವರು ಯಿದ್ದಲ್ಲೆ ।
ಸಿರಿ ಶಂಖ ಚಕ್ರ ಧಾರಿಗಳು ಮಾತ್ರವರಲ್ಲ ।
ಮರಗಳು ನಿರುತ ತತ್ತದಾಕಾರರೂ ।
ಎರಡು ವಿಧರು ವುಂಟು ಸಾಅಂಶ ನಿರಂಶ ।
ಇರುತಿಪ್ಪರು ಸ್ಥಾವರ ಜೀವಿಗಳೆನ್ನು ।
ಹರಿಯು ಸೇವಿಸುತಲಿ ತಮ್ಮ ಶಕ್ತ್ಯಾನುಸಾರ ।
ಪರಿ ಪರಿ ಆನಂದ ಅನುಭೋಗಿಸುತಲಿ ।

ಸಿರಿ ಮಹರಾಜ ಗೋಪಾಲ ವಿಠ್ಠಲ ರೇಯು ।
ಪರಿಪರಿ ರೂಪಸಾಗ್ಯವರ ಪಾಲಿಸುವ ॥ ೬ ॥

ಆದಿ ತಾಳ

ಬಿಂಬನಾಗಿ ಪ್ರತಿ ಬಿಂಬ ಗಳಂತೆ ರೂಪ ।
ಎಂಭತ್ತು ನಾಲ್ಕು ಲಕ್ಷ ಯೋನಿ ಜೀವರಾಶಿಗೆ ।
ಬಿಂಬನಾಗಿ ಹರಿಯು ಯಿಂಬಾಗಿ ತದಾಕಾರ ।
ಬಿಂಬನಾಗಿ ವೊಳಗೆ ಯಿದ್ದು ಅವರು ಯೇನು ।
ಹಂಬಲಿಪರಾನಂದ ಸಂಭ್ರಮ ವೊದಗಿಯಿಪ್ಪ ॥
ಗಂಭೀರ ಗುಣ ಭಕ್ತರ ಪೊರವ ಕು ।
ಟುಂಬಿ ಎನಿಪಾನಂದಾಂಬುಧಿಯು ಡಂಭ ಜೀವರಿಗತಿ ಸಂಭ್ರಮಪ್ರೊ ।
ಉಂಜೋರು ಅಪಾರ ಸುಖ ಜ್ಞಾನ ಮುಕ್ತರಿಗುಂಟು ।
ಬಿಂಬನಾದ ಶ್ರೀಹರಿಯು ತಿಳಿಸಿ ಕೊಡುವ ।
ಕಾಂಬೋದೆ ಮಾತ್ರ ಭೋಗ ವೆಂಬಾನುಭವಸಲ್ಲ ।
ತುಂಬಿದಾನಂದ ಪೂರ್ಣ ರಿವರು ನೋಡು ।
ಹೊಂಬಣ್ಣ ವಸ್ತ್ರ ಕಂಬಳಿ ಕಟ್ಟಿದ ಕ್ಷಣ ।
ಕಂಬಳಿಯು ಬಣ್ಣವು ಹೊಂಬಣ್ಣ ನೇರುವದೆ ।
ಕುಂಭಿಣಿಯಲ್ಲಿ ವೃತ್ತಿ ಸುಖ ದಃಖ ಅನುಭವ ।
ವೆಂಬ ಜ್ಞಾನ ವುಂಟು ಭೋಗವುಇಲ್ಲ ।
ಬಿಂಬ ಹರಿಗಿಲ್ಲ ಯೆಂಬೋದೇನಾಶ್ಚರ್ಯ ।
ಸಂಭ್ರಮ ಪದ ಮೂರ್ತಿ ಗೋಪಾಲ ವಿಠ್ಠಲ ।
ಅಂಬುಜನಾಭನ ಪಾದಕ್ಕೆ ನಮೊ ನಮೊ ॥ ೭ ॥

ಜತ್ತೆ

ಚಿತ್ರ ವಿಚಿತ್ರ ಮುಕ್ತರ ಕ್ರೀಡ್ಯಾವನು ಬಲ್ಲ ।
ಮುಕ್ತಿ ದಾಯಕ ಗೋಪಾಲ ವಿಠ್ಠಲ ಬಲ್ಲ ॥ ೮ ॥

ಶ್ರೀ ವಿಜಯ ವಿಠ್ಠಲ

# ೨೪ ಮರುದ್ಗಣದ ತಾರ ತಮ್ಯ ಪದ

ರಾಗ ಭೂಪಾಳಿ ಝಂಪಿ ತಾಳ

ಮರುತಗಳ ನಾಮವನು ಉದಯದಲಿ ಯೆದ್ದು ।
ಸ್ಮರಿಸಿದವರ ದುರಿತ ಪರಿಹಾರ ವಾಗುವದು ॥ಪಲ್ಲ॥
ಪ್ರಾಣ ಅಪಾನನು ವ್ಯಾನ ಉದಾನ ಸ ।
ಮಾನ ಮತ್ತೆ ನಾಗ ಕೃಕಲ ಕೂರ್ಮ ॥
ಏನಂಬೆ ದೇವದತ್ತನು ಧನಂಜಯ ಪ್ರವಾ ।
ಹನನು ವಿವಹ ಸಂಯಾ ಸಂಪಾಪಾನೆಂದು ॥ ೧ ॥
ಶೀಲ ಪರಾವಹ ಉದ್ವಹಾ ವಹನಂಕು ।
ಕಾಲ ಶ್ವಾಸ ಅನಳ ಪ್ರತಿಬಲ ॥
ಬಾಲಕುಮುದಾ ಕಾಂತ ಶುಚಿ ಶ್ವೇತ ಅಜಿತ ಗುರು ॥
ಮೇಲಾಗಿ ಸಂಸಾ ಪ್ರವರ್ತಕಾ ಕಿಲ ರಸ್ನ ॥ ೨ ॥
ತರುವಾಯು ಅಜಿತ ನಯನು ಕಪಿ ಜಡ ದೇವ ।
ಮರಳೆ ಮುಂಡುಕ ಸತತ ಸಿದ್ಧರಕ್ತಾ ॥
ಸರಸ ಕೃಷ್ಣ ಪಿಕ ಕುಕ ಯತಿ ಭೀಮ ಹನು ।
ಮ ರಿಯಪಲಿ ಪಿಂಗ ಅಹಂ ಪ್ರಾಣ ಕಂಪನಾ ॥ ೩ ॥
ಇವರ ಸಹಿತವಾಗಿ ಸೂತ್ರನಾಮಕ ಮೂಲ ।
ಪವಮಾನ ನೊಡನೆ ಗಣನೆಯನು ಮಾಡಿ ॥
ಶವಕದಿಂದಲಿ ತಾರತಮ್ಯವನೆ ತಿಳಿದು ।
ಶ್ರವಣದಲಿ ಕೇಳಿ ಸಾಕಲ್ಯವಾಗಿ ನಿತ್ಯ ॥ ೪ ॥
ಇದನೆ ಪಠಿಸಿದರೆ । ಜನ್ಮ ಜನುಮಾಪಾ ಪಾನ ।
ಉದರಿ ಪೋಗುವದು ಲೇಶ ವುಳಿಯದೆ ॥

ಪದುಮನಾಭಾ ನಮ್ಮ ವಿಜಯ ವಿಠಲ ರೇಯನ |
ಪದವ ಭಜಿಸುವದಕ್ಕೆ ಜ್ಞಾನವೆ ಪುಟ್ಟುವದು || ೫ ||

೧೯ ನೇ ಕಕ್ಷದಲ್ಲಿಯ ಮುನಿಗಳ

## ೨೫ ಪ್ರಮೇಯ ತಾರತಮ್ಯ ಪದ

ಉದಯ ರಾಗ ಝಂಪೆ ತಾಳ

ಮುನಿಜನರ ನೆನಿಸಿ ಜನರೂ |
ಮುನಿಜನರ ನೆನಿಸಿ ಬಿಡ |
ದನುದಿನದಲಿ ನಿಮ್ಮ ಮನ ಮಲಿನ ಪೋಗಿ ಸ |
ಜ್ಜನ ಸಂಗ ವಾಗುವದು ||
ಅನುಮಾನ ವಿಲ್ಲ ಗುಣ ಗಣ ವನಧಿ ಹಂ ಪೊಲಿದು ಘನವಾಗಿ —
ಪಾಲಿಸುಸುವನು ||ಪಲ್ಲ||
ಮಿತ್ರ ಮಿತ್ರಾಯು ವಿ |
ಚಿತ್ರ ಭಾರ್ಗವ ವಿಶ್ವ |
ಮಿತ್ರ ಮೈತ್ರಾ ಮೈತ್ರ ವಾರುಣಿ ಭೃಗು ವೀತಿ |
ಹೋತ್ರ ಕಪಿ ಗಾರ್ಗ್ಯ ಗಾಲವ ಗರ್ಗ ಗಾರ್ಚವಾ |
ಅತ್ರಿ ಅತಿ ಅಷ್ಟವಕ್ರ |
ಪತ್ರ ಫಲಾಪ ವಟು ಶ್ಯಾಂಡಿಲ್ಯ ಶಕಟ ಸು |
ನೇತ್ರ ಸುಮಾಂಗಲ್ಯ ಸಂಸ್ಕೃತಿ ಭಾರದ್ವಾಜ |
ಗೋತ್ರ ಗೌರಿವೀತ ಹವ್ಯ ಕಪಿ ಶಂಖ ಕಷಿ |
ಮೈತ್ರಾವರುಣ ವಾಧೂಳಾ || ೧ ||
ಉಪಮನ್ಯು ಶಂಪು ವುದಾಲಕಾ ಕೌಂಡುಣ್ಯ |
ಅಪುನವಾನ ಅತಿಥಿ ಪಾಂಶು ಚಾವನ ಜವನ |

ಉಪಮಿಃಥ್ಯ ಕಪಿಲ ಕಾಶ್ಯಪ ಕಾಣ್ವ ಹರಿತ ಕ |
ಶ್ಯಪ ಪ್ರಾತಿಮಾಷ ರೈಭಾ ||
ವಿಪುಳ ಜಮದಗ್ನಿ ವಾಲ್ಮೀಕಿ ರೇಭ ಜಾಬಾಲಿ |
ಸ್ವಪನ ಸಾತ್ಯಕಿಯು ಸಾವರ್ಣ್ಯಾಳ ದೇವರ ತತಿ |
ತಪದೈವಲ ಸಿತ ಗೌತಮ ಛಪ್ರ ಸ್ವಾತಂತ್ರ |
ಕಪಿ ಕುತ್ಸ ಪಾರ ಕುತ್ಸಾ || ೨ ||
ಮುನಿ ಮಾದ್ರ ಮಠಣ ಶರ್ಯ ಬಾದರಾಯಣ |
ಕನಕ ಕಾತ್ಯಾಯನ ಮಾರ್ಕಂಡ್ಯ ಮಾಂಡವ್ಯ |
ಪುನಕ ಶೌನಕ ರೋಮಹರ್ಷಣ ಸೌಭರಿ ತೃಣಬಿಂದು ಬಾಷ್ಕಳಾಖ್ಯಾ |
ಪನಸ ಅಘಮರ್ಷಣಾ ಪ್ರಮಥ ಪ್ರಾಗಾಧ ಜೀ |
ವನಯಾಜ್ಞವಲ್ಕ್ಯ ಜೀವಂತಿ ಮಾತಂಗ ಶೋ |
ಭನ ಸಕಕೃತಿ ಭಾರ್ಗವ ಸುರವತ್ಸ ಚಂ |
ದನ ಧೌಮ್ಯ ಆರ್ಯ ರುಚಿರಾ || ೩ ||
ವಾಸಿಷ್ಟ ಶ್ರೀವತ್ಸ ಲೋಹಿತಾಷ್ಟಕ ಶರ್ಮ |
ವಾಸುಳೆ ಋಷಿ ಶರಣಕ ಕರ್ದಮ ಮಾರೀಚಿ ಪಾ ||
ರಾಶರ ಪಲ್ಲಾದ್ರಿಧರ ಶಕ್ತಿ ಪೈರೋಹಿತ್ಯ |
ಭೇಷಿಜಾ ವಾಯು ಲಿಕಿಯಾ ||
ಭೂಷಣಾ ಬಾರ್ಹಸ್ಪತ್ಯ ದಾಲ್ಭ್ಯ ಸುಯಜ್ಞಜ್ಞ |
ವೇಶ್ಯಮುಖ ಸಮರಿಧಿ ಸಾಲಂಕಾಯನಾ ಧರ್ಮ |
ದೈಸಿಕಾ ದೇವರಾತ ವತ್ಸರಾ ಜಾರ್ವ ನಾನಾಶಯ ದೇವಶ್ರವತಾ |೪|
ಗವಿಷ್ಠರಾ ವಾಮ ವಾಮರಿತ್ಯ ಕಾಲಗ್ರ |
ಪ್ರವ ಪೂರ್ಣ ವಾಹಕ ಕೃತು ಆಂಗಿರಸಾಂಗಿರಾ |
ಪವನ ಪ್ರಚಿನ ಯಜ್ಞರಿಷ್ಟ ಶತನಾಪಾ |
ಲವ ಶಮನ ಋಷಿ ಶೃಂಗ |
ಕಪಿವೇವಶಾಲ ವಿಶಾಲ ಕೌಸಿಕ ಶುಚಿಭುವನ ಊರ್ಜಯನ -

ಮಹಾಋಷಿ ಬಹುಧ ಸಂ ।
ಭವಸ್ತಂಭ ಕಿರಾರಿ ಕಪಿಸೇನ ಶಾಂಡಿಲ್ಯ ।
ಪವನ ದಮ ಬೀಜವಾಪಿ ॥೫॥
ಉಲಿಬಲು ಧನಂಜಯ ವಾಲಿಖಿಲ್ಯ ಮಾಯ ।
ಕಲಿಕಿ ಶೃಂಗಿ ಮಧು ಚಂದ ಪಿತನು ಬಹು ।
ಬಲಧೂಮ್ರ ಜರಠ ಊರ್ವಾಸ ಐಕ್ಯಾಯನ ।
ತ್ರಿಬುಕ ವಿಭಾಂಡ ಶರಭಾ ॥
ಪುಲಸ್ತ್ಯ ದಧೀಚಿ ಕಥಾಸೂನು ಸೇವಾಸ್ಯ ಮೌದ್ಗಲ ವಿಷ್ಣು ಶ್ರೀಧ
ಋಷ್ಟಿ ಕುಕ್ಷ್ಮಮ ನಂತತ್ತ್ವ ಪುಲಹ ಹನಿಧಾನ ವೃತ್ತಾಂತ ವೃತ್ತ್ಯಮ-
ಕಚರ ।
ಬಲವೀರ್ಯ ಬಭ್ರುವನು ॥೬॥
ಸುತಪ ಅಪವರ್ಗ ಹಿರಣ್ಯನಾಭಾ ಅ ।
ದ್ಯುತ ಅಜಾವಿಡಾ ಪರ್ವತ ಶ್ವೇತಕೇತ ಮಹ ।
ಧೃತಿ ಶಕ್ತಿ ವೈಶಂಪಾಯನ ಪೈಲ ।
ಜಯ ಸತ್ಯವೃತ ಶೃತಿ ಧೃತಿ ಆಯಕಾ ॥
ಪ್ರತಿ ಕೀರ್ತಿ ಸುಪ್ರಭಾ ವತ್ಸ ವ್ಯಕಾಂಡ ಸೂ ॥
ಮತಿ ಕ್ರೋಧ ಕೊಲಿ ಗೋಬಲಾ ಮಾತೃಕಾನಂದ ।
ದ್ಯುತಿ ತಪ ವಿದ್ವಾಹ ದರ್ಭಾ ಜಾನ್ಹವ ಸೀಲ ।
ಕಥನ ಸರ್ವಸ್ಥಂಬವಾ ॥೭॥
ನೈಧ್ರುವಾ ದೀರ್ಘತಮ ಜಮದಗ್ನಿ ಕಾಂಚಿ ।
ಸದ್ಮನಿ ಕಾಂಡಮಣಿ ಮಾಂಡವ್ಯ ಪಾಚಶರ ।
ಶುದ್ಧ ಸಂವರ್ತ ಸಂತತ ಕಾಮ ಸಂಪತಿ ಸಿದ್ಧಿ ಸನಕ ಸನಂದನಾ ॥
ವಿದ್ಯಾಂಗ ಹವ್ಯ ರೋಹಿತ ಶರ್ಮ ಸೂಕರ್ಮ ಪ್ರದ್ವಾಳ ಪ್ರಚೆಥ್ಯ-
ಹರಿಮೇಧ ಮೇಧ ಪ್ರಸಿದ್ಧ ಮಯೂರ ಶುಕ ಕಪಿಲ ಕಾಪಿಲ್ಯ ಗುಣ
ಬುದ್ಧಿ ಸುಮೇಧ ಪೇನ್ನ ॥೮॥

ಪಂಚ ಪಂಚಾ ಸಪ್ತ ಅಷ್ಟಕಾಲದಲಿಪ್ರಾ ।
ಪಂಚದೊಳು ತೊಡಕವಲಿ ಬುದ್ಧಿ ಚಿತ್ತದೊಳಿಟ್ಟು ।
ಅಂಚಿಗಂಚಿಗೆ ಬಹು ಮುನಿ ಗಳೊಳಗಿಪ್ಪವರ ।
ಕೊಂಚ ಮುನಿಗಳಪೇಳಿದೆ ॥
ವಂಚನೆ ಯಿಲ್ಲದೆಸ್ಮರಿಸಿ ಮಧ್ವಮತಪೊಂದಿ ।
ಸಂಚಿತಾಗಮ ಕಳವ ಸರ್ವ ಸುಖ ಏವ ವಿ ।
ರಂಚಿಪಿತ ವಿಜಯ ವಿಠ್ಠಲರೇಯ ಯೆಂದು ರವಿ ॥
ಪಂಚಿ ನಂದಧಿ ಪೊಳವನೂ ॥ ೯ ॥

೧೯ ನೇ ಕಕ್ಷದ ರಾಜರುಗಳ

## ೨೭ ತಾರತಮ್ಯ ಪದ

ಉದಯ ರಾಗ ಝಂಪಿ ತಾಳ

ಕ್ಷಿತಿಪರನ ಸ್ಮರಿಸಿ ಜನರು ।
ಕ್ಷಿತಿಪರನ ಸ್ಮರಿಸಿ ನಿಮಗಪಜಯ ವೆಂದಿಗೆಯಿಲ್ಲ ।
ಸುಪಥ ವಾಗಿಪ್ಪ ದನುದಿನ ಸಂಚರಿಪ ಮಾರ್ಗ ।
ತಪನಾಬ್ಜ ವಂಶದಲಿ ।
ದಿಪುತ ರಾದವರನೆ ಕೃಪವನಘ ಹರಿಪೊಲಿವಾ ॥ಪಲ್ಲ॥
ಬಲಿ ವಿಭೀಷಣ ರುದ್ರಗಣ ರಂತಿದೇವತಾ ।
ಮಲಯಧ್ವಜ ರಾಮ ಭೋಜಾ ಯದು ।
ಬಲಗಿರಿಶ ಗಾಂಧಾರ ಗಯ ಸೇತು ಈಶ್ವರಾ ।
ಕುಲಿಶಧ್ವಜ ಸಗರ ವೀರಾ ॥
ನಳ ಹರಿಶ್ಚಂದ್ರ ಚಂದ್ರಕಾಂತ ಆಕಾಶ ।

ಸುರಥ ಶತಿಬಿಂದು ಮಾಂಧಾತ ಧ್ರುವ ಶಿವ ಪ್ರಿಯ ।
ಫಲ ಭರತ ಅಷ್ಟಾಕ ಪಾಲಿ ಲೋಹಿತ ನೃಗ ಸುಬಲ ಕುಕ್ಷಿ
ಯದು ಭೂಷಣಾ ॥ ೧ ॥
ವಸುಪ್ರದಾ ಸುಖವೀರ್ಯ ಯದು ಕುರು ಋತುಪರ್ಣ ।
ವಸುಧರ್ಮ ಖಟ್ವಾಂಗ ಧೃತರಾಷ್ಟ್ರ ಸಾವರ್ಣ ।
ಶಿಶುಪಾಲ ಪವನ ದೇವಕ ಜನಕ ವೈದರ್ಭ ।
ಅಸಮಂಜ ಸಂಜನಾಭಾ ।
ವಸುದತ್ತ ಸೌಗಂಧಿ ಮಣಿ ಮುಕ್ತ ಕೇಸರಿ ।
ನಿಸಿದಮಣಿ ವಾಹನಾ ಮಹವೀರ್ಯ ಕ್ಷೇಮಾಂ ।
ಕುಶಿಕ ಕುಂಡಿನ ಹಸ್ತಿ ಸಂಜ್ಞತಿ ಪುರುಧಾಪುರು ।
ವಸೂ ಅರಿಹ ಹೇಮಗರ್ಭ ॥ ೨ ॥
ಕಾಕುಸ್ಥ ಇಕ್ಷ್ವಾಕು ಮರುತ ।
ಮುನಿ ಚೈತ್ರರಥ ವಿಕುಕ್ಷಿ ಸುರಥಾ ।
ಅರವಾಚಿ ಶೃತಿ ಕೀರ್ತಿನ ।
ಹುಕದೀಪ್ತ ಕೇತ ಸುಮಂತ ವಿಭಾವಸು ।
ಶಕುತಿ ಶಿಬಿ ಸಾರ್ವಭೌಮಾ ॥
ಸುಖಸೇನ ಭಗೀರಥಾ ಅಜಮಾನು ಸ್ವಭಾನು ।
ಮುಖಪತಿ ಮಾಂಧಾತ ಧೃತ ನಿಧೃತ ಕೃತ ।
ಕುಕುರ ಕುಂಡೋದರ ತ್ರಯ ಗರ್ಭ ದಿರ್ಘಾಯು ।
ರುಕ್ಮಾಂಗದ ವಿರಾಜಾ ॥ ೩ ॥
ಪುರವಿರಾಧ ಸುವಿರಾಧ ಭದ್ರಾಕ್ಷ ರಾಣಕಾ ।
ಹರಿಧರ್ಮ ನೇತ್ರ ಸುನೇತ್ರ ಕೇತುಮಾಲಾ ಪು ।
ರೂರವ ಮಿತ್ರ ಮನ ಜಯಸೇನ ಶುಭವರ್ಮ ।
ಧರಯುತೀ ಪುಣ್ಯದ್ರವಿಣಾ ।
ಶರವೀರ ಸೌವೀರ ಪೌಷ್ಯ ಕೇಸರಿ ಸಿಂಗ ।

ಪುರುರುಕ್ಷ ಪ್ರದೀಪ ದಿಲೀಪ ಅಷ್ಟಕ ಕಂಸ |
ಅರಣಿ ಭೂಮನ್ಯು ಪೃಥು ಮಹಾ ವೀರ್ಯ |
ಸುರದತ್ತ ಹರಿವೀರ ಮನ್ಯು ವಿಶ್ವ | ॥ ೪ ॥
ಸುಮತಿ ಸುಂಹರ ರಘು ಮುಚಕುಂದ ದಶರಥ |
ಸುಮನ ದುಷ್ಯಂತ ಸಂಯಾತಿ ಹಂಸಧ್ವಜ |
ದಮಯಂತಿ ನೀಲಾಂಗ ಧರ್ಮಾಂಗದಾ |
ಶಿವಾಲ ವಿಪುರ ರವಿಕಾಂತ ನಹುಷಾ ॥
ದ್ರುಮಿಳ ಪದ್ಮ ಶತಾಯುಧ ಮಯೂರಧ್ವಜ |
ಪವಿಲ ಕೀರ್ತಿವಾನ ತೊಂಡವಾನ ವಿದರ್ಭ |
ಅಮಿತ ಸಂಕ್ರಮ ನಾಭಾಗಂಬರೀಷ |
ಸಾವಿತ್ರ ಕಾರ್ತವೀರ್ಯ ॥ ೫ ॥
ಜನಮೇಜಯ ಪರಮೇಷ್ಠಿ ದೀರ್ಘಾಂಗ ಪ್ರಶ್ಯಾಧರ |
ಮಣಿಗ್ರೀವ ಭೃಗು ದೇವದತ್ತ ಪ್ರಿಯನಾವರ್ತ |
ಮಣಿನಾಭ ಚೋಳ ತ್ರಿಸಂಯ ಸಂಯು ಮಣಿಕೇತ ಪಾಂಚಜನ್ಯ |
ಧನಂಜಯಾ ಕಾಸಿಸುಕಾಂತ ಕುಶ ಕುವನಾಭ |
ಮಣಿಸೇನ ಪಾಂಡವ ಜಂಬುನದಿ ದಿವ್ಯರಥ ವನಕಕ್ಷಸೇನ ಜಾಕ್ಷಿತ –
ಪರಿಕ್ಷಿತ ದೃಂಪ್ಯ ಅಸು ಅನಾಯು ಪದಾತಿ | ॥ ೬ ॥
ಹರಿಶ್ರವಾ ಉತ್ತಾನಪಾದ ಕುಂಡಲಗಜಾ |
ಯುವನಾಶ್ವರಾಜ ನೀಲಧ್ವಜಾ ಸುರವೃತ್ತ |
ಕವೇರಳಯು ದೃಢಾಯು ವಿಶಾಲ ಪ್ರತಿ |
ಧ್ರುವ ಚಿತ್ರವೀರ್ಯ ಸುಭಗಾ ॥
ಕವಿವಂಗ ಅಂಗ ಕೋಸಲ ಹೇಮಗರ್ಭ ಶುಚಿ |
ಶ್ರವ ಇಳಾವರ್ತ ವಿದುರ ತ್ರಯ ಗರ್ಭದೃತ |
ಸವಿರಜಾಮಿಢ ವಿಕುಂಠ ಸುಂಭೀ ಶೂ |
ಹವಿ ಅಭಿರಾಜ ಸುಹಿಜಾ ॥ ೭ ॥

ಸಿಂಧು ಶುಭವರ್ನ ಸಿರ್ಯಾತಿ ಯಯಾತಿ ಸಕ್ಯ ।
ಸಂಧ ರೋಹಣ ಸಹದೇವ ವಾಸೀ ।
ನಂದನ ಸುಮನಸ್ಯು ಸ್ವರ್ಭಾನು ಪಿಪ್ಪಲ ರವಿ ।
ಬಿಂದು ದ್ಯುಮ ನಿಕುಂಪಾತಿ ।
ಚಂದ್ರಹಾಸಾ ಅಶ್ವವಂತ ಶಬಲಾಶ್ವ ಅಣು ।
ಚಂದ್ರಪರ್ಣ ಜಪನ ನತ್ಯ ಸಯಾತಿ ಬಲ ।
ವೃಂದತಾಮ್ರಧ್ವಜ ವೃಷ್ಣಿ ಸಹೋತ್ರ ದೇವ ।
ವೃಂದ ವಿಷ್ಣುವರ್ಧನಾ ॥ ೮ ॥
ಎಂತು ಪೇಳಲಿ ಕ್ಷಿತಿಪ ರಾಯರ ಪೆಸರುಗಳು ।
ಸಂತತದಲ್ಲೆಣಿಸಿದರೆ ಪಾರು ಗಾಣವರಾರು ।
ಚಿಂತನಿಗೆ ತೋರಿದದು ಸಾರಿದೆನು ।
ಚನ್ನಾಗಿ ಸಂತರು ಕೇಳಿ ಲಾಲಿಸೀ ।
ಪಿಂತೆ ಬಲುಜನನದ ದುರಿತೌಘ ಪೋಗುವದು ।
ಸಂತೋಷ ವಾಗುವದು ಪಠಿಸಿದ ಜನಕೆ ಸತ್ಯ ।
ಕಂತುಪಿತ ವಿಜಯ ವಿಠಲನ ಚರಣಾಂಬುಜವ ।
ಸಂತತಿಸಹಿತ ಕಾಂಬುವರೊ ॥ ೯ ॥

ವಿಜಯವಿಠ್ಠಲ

## ೨೭ ನದೀ ತಾರತಮ್ಯ ಸುಳಾದಿ

( ನದಿಗಳಲ್ಲಿರುವ ಭಗವದ್ರೂಪ )

**ರಾಗ ಮಾರವಿ ತಾಳ ಧ್ರುವ**

ನದಿ ತಾರತಮ್ಯವನ್ನು ತಿಳಿದು ಚನ್ನಾಗಿ ನಿನ್ನ ।

ಹೃದಯ ದೊಳಗೆ ಧ್ಯಾನ ಮಾಡೋ ಮನುಜಾ |
ವಿಧಿ ಸರಸ್ವತಿಯ ಕೂಡ ಇಂದಿರೇಶನ ವ್ಯಾಪ್ತಿ |
ಪದುಮ ಜಾಂಡಾವರ್ಣ ವೆಲ್ಲ ಗುಣಿಸು |
ಇದರಿಂದ ನಿನಗೆ ಮಹಾ ಜ್ಞಾನ ಸಿದ್ಧಿಸುವದು |
ಪದುಮನಾಭನ್ನ ಸ್ಮರಿಸು ನದಿಗಳಲ್ಲಿ |
ತ್ರಿದಶಗಂಗಾ ಮಿಕ್ಕ ಸರಿತ ತಟಾಕ ವಾಪಿ |
ತದುಪರಿ ದೇವಖಾತಾ ಸರೋವರ ದೊಳು |
ಇದರಲ್ಲಿ ಹರಿ ತಾನೆ ನಿಯಾಮಕನಾಗಿ |
ಒದಗಿ ಪೊಳೆವುತಿಪ್ಪ ಪೊಂದೊಂದು ನಾಮವ |
ಅದುಭುತ ವಾಗಿವೆ ಕೇಳಿ ಕೌತುಕವನ್ನು |
ಪದುಮಲ ರೂಪಂಗಳ ಪೊಂದೇಸವನಾ |
ಪದುಮಜಾದ್ಯರು ನಿತ್ಯ ಗುಣರೂಪ ಕ್ರಿಯಾದಿಂದ |
ಪದೋಪದಿಗೆ ಶ್ರೀಹರಿಯ ಚಿಂತಿಸುವರು |
ಉದಯ ಕಾಲದಲೆದ್ದು ಪಯೋವದ್ರವರೂಪೇಣ |
ಮುದದಿಂದಲಿ ಸ್ತವನ ಮನದಲ್ಲಿರಲಿ |
ಉದಕದಲ್ಲಿ ನಾನಾ ಕ್ರೀಯುಗಳು ಮಾಡುವಾಗ |
ಇದೆ ಸ್ಮರಣೆ ಯಿರಲಿ ಆವಾವಲ್ಲಿ !
ಸುದರಶನಪಾಣಿ ವಿಜಯ ವಿಠ್ಠಲ ತನ್ನ |
ಪದವ ತೋರಿಸುವನೊ ಸುಜನರಲ್ಲಿ ಪೊಂದಿಸಿ | ॥ ೧ ॥

ಮಟ್ಟ ತಾಳ

ಧರುಣಿಯೊಳಗೆ ಭೂಮಿ ಸುರನು |
ಮರುತ ಮತವಸಂಶುದ್ಧನಾಗಿ |
ನೆರೆನಂಬಿ ಸತತ ಸರಿತ್ತು ಮಧ್ಯದಲಿದ್ದ |
ಪರಮಾತ್ಮನ ರೂಪಗಳ ಅರಿದು ಆಚರಿಸಿದರು |
ಸರುವ ತರಂಗಿಣಿಗಳು ಸರಿಸದಲ್ಲಿಯಿದ್ದು |

ಪೊಂದುತಲಿಪ್ಪವಯ್ಯಾ ವರುಣ ದೇವನ ನೊಡನೆ
ಕರಣಶುದ್ಧನ ಮಾಡಿ ವರವ ಪಾಲಿಸುತಲಿ ।
ಸರಸಿಜ ನಯನ ವಿಜಯ ವಿಠ್ಠಲನ್ನ ।
ಶರಣಗೆ ಯಿನ್ನಾವ ದೊರಕುವದು ಪುಣ್ಯ ॥ ೨ ॥

ತ್ರಿವಿಡಿ ತಾಳ

ಸುರಗಂಗೆಯಲಿ ಶಂಖ ಚಕ್ರ ಗದಾ ಪದುಮ ।
ಧರನಾಗಿ ಮಾಧವ ನಿಪ್ಪನಯ್ಯಾ ।
ವರ ಕುಶಾವರ್ತಕೆಯಲ್ಲಿ ಶಂಖಾರಿಗದಾ ।
ಸರಸಿಜ ಧರ ನರನಾರೇಯಣನೋ ।
ದುರಿತಾರಿ ಕೃಷ್ಣವೇಣಿಯಲ್ಲಿ ಶಂಖ ಚಕ್ರ ।
ಧರವು ಶಾರಂಗಧರ ಕೃಷ್ಣದೇವಾ ।
ತರಣಿ ತನುಜೆ ಯಮುನೆಯಲ್ಲಿ ದಂಡಕಾಂಬು ।
ಶರ ಶಾರಂಗ ಚಾಪಧರ ಹರಿ ಕೃಷ್ಣನು ।
ಸರಸ್ವತಿಯಲ್ಲಿ ದ್ವಿಭುಜ ಪದುಮನಾಭನು ।
ಇರುತಿಪ್ಪನು ಮರುದ್ವತಿಯಲ್ಲಿ ರಂಗ ।
ಸರಯೂ ನದಿಯಲ್ಲಿ ರಾಮನು ಧನುರ್ಬಾಣ ।
ಧರಿಸಿ ವಾಸವಾಗಿ ನಿಂದಿಹ್ಯನೋ ।
ನರಮದಸ್ಥ ಚತುರ್ಬಾಹು ಮಹಾವಿಷ್ಣು ।
ನಿರುತ ಶಂಖ ಚಕ್ರ ಗದಾ ಪದುಮದಲ್ಲಿ ।
ವರಹ ಸಂಭವೆಯಲ್ಲಿ ಯಿದೇ ನಾಮಕ ದ್ವಿಭುಜಾ ।
ಸ್ಥಿರವೆನ್ನಿ ಸಿಂಧು ನದಿಯಲ್ಲಿ ಕ್ಷೀರಾಬ್ಧಿ ।
ಪರಿಯಂಕನೋ ಇತ್ತ ಭವನಾಸಿಯಲ್ಲಿ ದೇವಾ ।
ನರಸಿಂಹ ನಿರುತಿಪ್ಪ ಚತುರಾಯುಧ ।
ಧರಿಸಿ ಕುಮುದ್ವತಿಯಲ್ಲಿ ತ್ರಿವಿಕ್ರಮಾ ವಂ ।
ಜರಿಯಲ್ಲಿ ಹಯಗ್ರೀವ ಶಂಖಾಕ್ಷಮಾಲನು ।

ನೋಡುವ ಭಯಂಕರ ಭೀಮರಥಿಯಲ್ಲಿ ಶ್ರೀಧರಾ ।
ವರ ತಾಂಬ್ರ ಪರ್ಣಿಯೊಳು ಅನಂತಾತ್ಮಕ ಸ್ವಾಮಿ ।
ಮಿರಗುತಿಪ್ಪನು ಮಲಾಪಹಾರಿಯಲ್ಲಿ ಜನಾರ್ದನ ।
ನಿರ್ಮಲ ಪಿನಾಕಿಯಲಿ ಕೇಶವ ಚ ।
ತುರ್ಬಾಹು ವಾರಿಜ ಶಂಖಾಸಿ ಗದಾಧರನೊ ।
ನಾರಳೆ ಪ್ರಥುಕು ಸಾಗರ ಗಾಮಿನಿಗಳ ಮಧ್ಯ ।
ಸ್ಮರಿಸು ಕೇಶವಾದಿ ಬೇಕಾದ ಮೂರ್ತಿಯಾ ।
ಪರಮ ಮಂಗಳ ವಿಗ್ರಹ ವಿಜಯ ವಿಠಲ ರೇಯಾ ।
ಇರುತಿಪ್ಪ ಯಾಪರಿ ಸರ್ವನದಿಗಳಲ್ಲಿ ॥ ೩ ॥

ಅಟ್ಟ ತಾಳ

ಸರೋವರಗಳಲಿ ದತ್ತಾತ್ರೇಯ ಸ್ವಾಮಿ ಪು ।
ಷ್ಕರಣಿ ಸತ್ಯಚಂದ್ರ ಪುಷ್ಕರಣಿಲಿ ನೋಡು ।
ವರದ ಕಟಿಸ್ಥಸ್ತ ಶಂಖ ಸುದರಶನ ।
ಧರನಾಗಿ ಇಪ್ಪ ಶ್ರೀನಿವಾಸ ಮೂರುತಿ ।
ಸಿರಿರಂಗ ಸೂಕರದ್ವಯ ಸರೋವರದಲ್ಲಿ ।
ಆದಿ ಕೊಂಡಾಡುವದು ದೇವಖಾತದಲ್ಲಿ ।
ಇರುತಿಪ್ಪ ಗದಾಧರ ಕ್ಷುದ್ರನದಿಯಲ್ಲಿ ।
ಸಿರಿಲಕ್ಷ್ಮಿ ನಾರಾಯಣ ಭಗವಂತನೂ ।
ಪರಮ ಶೋಭಿತ ತಟಾಕಗಳಲ್ಲೀಗ ।
ಉರಗಶಾಯಿ ಯಾದ ಅಚ್ಯುತಾತ್ಮಕ ದೇವ ।
ನಿರುತಿಪ್ಪ ವಾಪಿಯಲ್ಲಿ ಸಾಸಿರ ಆರಿ ।
ಧರನು ಸರ್ವದ ಕೂಪದಲಿ ನಾರಾಯಣ ।
ಎರಡೈದು ವಾರಿಧಿಯಲ್ಲಿ ಮೂರ್ತಿಗಳು ವುಂಟು ।
ಅರಹು ಮಾಡುವೆನಯ್ಯಾ ಮತ್ತೊಂದರಲಿ ತಿಳಿದು ।
ಪರಿಪರಿಯಿಂದಲಿ ಪೇಳುವದೇನು ಸಾ ।

ವಿಧವೆ ಮಾತ್ರವೊಂದೆ ಆವಾವ ಜಲದಲ್ಲಿ ।
ಸ್ಮರಿಸು ಕಾಲನಾಮಕ ಭಗವಂತನ ।
ನಿರುತ ಜ್ಞಾನಪೂರ್ಣ ವಿಜಯ ವಿಠಲನ್ನ ।
ಪರಿತೋಷದಲ್ಲಿ ನೆನಸಿ ಧನ್ಯನಾಗೊ ॥ ೪ ॥

ಆದಿ ತಾಳ

ಅಂತರ ಬಾಹಿರದಲ್ಲಿ ಈ ಪರಿ ತಿಳಿದು ।
ಸಂತತ ಸ್ನಾನ ದಾನಾದಿಯ ಮಾಡು ಮನುಜಾ ।
ಸಂತರ ಸೇವೆಯನ್ನು ಮಾಡಿ ಸಂಪಾದಿಸು ।
ಚಿಂತಿಸಿನಗೆ ಯಿಲ್ಲ ಸಂಸೃತಿಯಾಕ್ಷಿದ್ದರೂ ।
ಅಂತಕನಾಳಿನ ಭೀತಿ ಮೊದಲೆ ಯಿಲ್ಲ ।
ಭ್ರಾಂತಿ ಮೊದಲಾದ ದುಷ್ಕರ್ಮ ಪೋಗುವದು ।
ಮಂತ್ರ ತಂತ್ರಗಳಲ್ಲಿ ಅನುಸಂಧಾನವೆ ಯಿರಲಿ ।
ಎಂತು ಪೇಳಲಿ ನಾನು ಭಾಗೀರಥ್ಯಾದಿ ನದಿಗಳು ।
ನಿಂತಲ್ಲಿ ಕುಳಿತಲ್ಲಿ ಆವಾವ ದೇಶದಲ್ಲಿ ।
ಅಂತರಾಳ ಮೇಲು ಅಧೋಭಾಗದಲ್ಲಿ ।
ಆದ್ಯಂತಕಾಲ ಬಿಡದೆ ಅತಿ ಸೂಕ್ಷ್ಮ ಪ್ರವಾಹ ।
ಅಂತಿಕ ದೂರದಲ್ಲಿ ತುಂಬಿದೆ ದರುಶನ ।
ಗ್ರಂಥ ಗಳಲ್ಲಿ ತಿಳಿ ವ್ಯಾಪ್ತಿಗಳಿಗೆ ಸಿದ್ಧ ।
ಪಿಂತೆ ಸುಜ್ಞಾನಿಗಳಿಗೆ ಯಿದ್ದಲ್ಲಿ ಪ್ರತ್ಯಕ್ಷ ।
ಎಂತಾಯಿತು ನೋಡಿ ಗಂಗಾ ಸರ್ವತ್ರ ವ್ಯಾಪ್ತಿ ।
ಇಂತು ಈ ಪರಿಯಲ್ಲಿ ಆಲೋಚನೆಗೈಯ್ಯಿ ।
ಸಂಶಯ ಪರಿಹಾರ ಹೀನಜನುಮ ಗಳಿಲ್ಲ ।
ಮುಂತೀಪ್ರವೇಯು ಕೇಳಿ ಮಲಕಳೆವ ನೀರಿನಲ್ಲಿ ।
ಚಿಂತೆಮಾಡುವದು ಕಲ್ಲ್ಯಾದಿಗಳ ವ್ಯಾಪ್ತಿ ।
ಇಂತು ಸಿದ್ಧಾಂತ ನಿಜವೋ ಯಿಲ್ಲಿ ತಾತ್ವಿಕರು ।

ಶ್ರೀಕಾಂತ ನಿದ್ದರಾಗೆ ದೋಷ ನಿರ್ಲಿಪ್ತರು ।
ಜಂತುರಾಶಿಯು ಯಾವುದು ಬಾಧಿಸಿದರು ಪುಣ್ಯ ।
ವಂತನೆಂದೆನಿಸುವ ಕಲಿಬಾಧೆಗೆ ಪಾಸಿಷ್ಟಾ ।
ಇಂತಾಗುವದಕ್ಕೆ ಕಾರಣ ಪಾವುದೆನೆ ।
ಸಂತಿಗಳು ಬಲ್ಲರು ಹರಿಯಾಜ್ಞಾ ವಿಚಾರಬಹುದೆ ।
ಪ್ರಾಂತಕ್ಕೆ ಯಿದೆ ಖಚಿತ ಮಾಡಿ ವಸ್ತ್ರ ವೈಲಿಗಿಯ ।
ಆಂತು ಗೊಂಡರೆ ಯಿದು ಮಡಿಯಾಗಲಿಲ್ಲ ಯಿದ ।
ರಂತೆ ವೈಲಿಗೆವಸ್ತ್ರ ಮಡಿವಸ್ತ್ರ ಸೋಂಕಿದ ।
ರೆಂತು ಪುಟ್ಟಿತು ನೋಡು ವ್ಯಾಲಿಗೆ ವಸನವೆಂದು ।
ದಂತಿ ವರದ ನಮ್ಮ ವಿಜಯ ವಿಠ್ಠಲ ವೇ ।
ದಾಂತ ವೇದಗಳಲ್ಲಿ ಪೇಳಿದಂತೆ ಯಿರಬೇಕು ॥ ೫ ॥

ಜತೆ

ನೀಚೋಚ್ಚವನೆ ತಿಳಿದು ಜಲದಲ್ಲಿ ಪ್ರವರ್ತಿಸು ।
ಗೋಚರಿಸುವ ನಮ್ಮ ವಿಜಯ ವಿಠ್ಠಲ ಸ್ವಾಮಿ ॥ ೬ ॥

## ಶ್ರೀ ಸೀತಾರಾಮ

೧. ಪ್ರತಿ ಉದಕದಲ್ಲಿ ೨೪ ತತ್ವಗಳು ತತ್ವಾಭಿಮಾನಿ ದೇವತೆಗಳು ಮತ್ತು ಬ್ರಹ್ಮ ಸರಸ್ವತಿ ದೇವೇರ ಸಂಗಡ ರಮಾಸಹಿತ ನಾರಾಯಣನ ವ್ಯಾಪ್ತಿ ದ್ರವ ರೂಪವಾಗಿಯೂ ತದಾಕಾರ ವಾಗಿಯೂ ತಚ್ಛಬ್ದ ವಾಚ್ಯವಾಗಿಯೂ ಇರುವದು. ಮತ್ತು ಉದಕದಲ್ಲಿ ನಾನಾಕ್ರೀಡೆ ಯಾಡುವರು ನಾನಾಜಲದಲ್ಲಿ ಕಾಲನಾಮಕ ಭಗವಂತನನ್ನು ಸ್ಮರಿಸಬೇಕು.

೧ ಸುರಗಂಗೆ = ಗಂಗಾನದಿಯಲ್ಲಿ ಶಂಖ ಚಕ್ರ ಗದಾ ಪದುಮ— ಮಾಧವ

೨ ಕುಶಾವತಿ - ಶಂಖಾರಿಗದಾ ಪದುಮ ನಾರಾಯಣ

೩ ಕೃಷ್ಣವೇಣಿಯಲ್ಲಿ - ಶಂಖ ಚಕ್ರ ಪದುಮ ಶಾರ್ಙ್ಗಧರ ಕೃಷ್ಣ
೪ ಯಮುನೆಯಲ್ಲಿ - ದಂಡ ಶಂಖ ಶರಶಾರಂಗಚಾಪ ಹರಿಕೃಷ್ಣ
೫ ಸರಸ್ವತಿಯಲ್ಲಿ - ದ್ವಿಭುಜ ಪದುಮನಾಭ
೬ ಮುದ್ವತಿಯಲ್ಲಿ - ರಂಗ
೭ ಸರಯೂನದಿಯಲ್ಲಿ - ಧನುರ್ಬಾಣಧರ ರಾಮ
೮ ನರ್ಮದಾ ನದಿಯಲ್ಲಿ - ಚತುರ್ಬಾಹು ಮಹಾವಿಷ್ಣು
(ಶಂಖ ಚಕ್ರ ಗದಾ ಪದುಮ)
೯ ಮಹಕಂಭವತುಂಗಾ - ದ್ವಿಭುಜ ವರಹ
೧೦ ಸಿಂಧು ನದಿಯಲ್ಲಿ - ಕ್ಷೀರಾಬ್ಧಿಶಾಯಿ
೧೧ ಭವನಾಸಿಕೆಯಲ್ಲಿ - ಚತುರಾಯುಧ ನಾರಸಿಂಹ
೧೨ ಕುಮುದ್ವತಿಯಲ್ಲಿ ತ್ರಿವಿಕ್ರಮ
೧೩ ವಂಝರಾ - ಹಯಗ್ರೀವ ರಂಜಾಕ್ಷ ಮಾಲಾ
೧೪ ಭೀಮರಥಿಯಲ್ಲಿ - ಶ್ರೀಧರ
೧೫ ತಾಮ್ರಪರ್ಣಿಯೊಳು - ಅನಂತಾತ್ಮಕ ಸ್ವಾಮಿ
೧೬ ಮಲಾಪಹಾರಿಯಲ್ಲಿ - ಜನಾರ್ದನ
೧೭ ಪಿನಾಕಿನಾ - ಚತುರಬಾಹು ಕೇಶವ ಪಾಶ ಶಂಖ ಅಸಿ ಗದಾ
೧೮ ಪೃಥಕಸಾಗರಗಾಮಿನಾನದಿಗಳಲ್ಲಿ - ಕೇಶವಾದಿ ಬೇಕಾದ ಮೂರ್ತಿ
೧೯ ಸರೋವರಗಳಲ್ಲಿ - ದತ್ತಾತ್ರಯ
೨೦ ಸ್ವಾಮಿ ಪುಷ್ಕರಣಿ - ವರದ ಕಟಿಹಸ್ತ ಶಂಖಚಕ್ರಧರ ಶ್ರೀನಿವಾಸ
೨೧ ಚಂದ್ರ ಪುಷ್ಕರಣಿಯಲ್ಲಿ - ಶ್ರೀರಂಗ ವರಹ
೨೨ ದೇವಖಾತದಲ್ಲಿ - ಗದಾಧರ
೨೩ ಕ್ಷುದ್ರನದಿಯಲ್ಲಿ - ಶ್ರೀಲಕ್ಷ್ಮೀನಾರಾಯಣ
೨೪ ತಟಾಕದಲ್ಲಿ - ಉರಗಶಾಯಿ ಅಚ್ಯುತಾತ್ಮಕ ದೇವ
೨೫ ವಾಪಿಯಲ್ಲಿ - ಸಾಸಿರ ಶಿರಧರ
೨೬ ಕೂಪದಲ್ಲಿ - ನಾರಾಯಣನು

ಸಪ್ತ ಸಮುದ್ರಗಳಲ್ಲಿ ಮಾತ್ರಗಳಲ್ಲಿ ಅನುಸಂಧಾನ ಪೂರ್ವಕವಾಗಿ ಪದುಮಜಾಂಡ ಆವರ್ಣ ಬಹಿರದಲ್ಲಿಯೂ ದೇಹ ಅಂತರ ನಾಡಿಗಳಲ್ಲಿಯೂ ಬಹಿರದಲ್ಲಿಯೂ ಈಪ್ರಕಾರ ಚಿಂತನವಾಡಿ ಸ್ನಾನವಾಡುವದು ಇಂಥ ಕಾಲ ನಿಯಾಮಕ ಭಗವಂತ ನಿಂದ ವ್ಯಾಪ್ತವಾದ ಸಕಲ ಗಂಗಾದಿ ನದಿಗಳು ನಿಂತಲ್ಲಿ ಕುಳಿತಲ್ಲಿ ಎಲ್ಲ ದೇಶದಲ್ಲಿ ಅಂತರಿಕ್ಷ ಮೇಲು ಕೆಳಗೆ ಆದ್ಯಂತಕಾಲ ಬಿಡದಲೆ ಅತಿ ಸೂಕ್ಷ್ಮ ಪ್ರವಾಹದಿಂದ ತುಂಬಿವೆ ಯೆಂದು ದರುಶನ ಗ್ರಂಥಗಳಲ್ಲಿ ಸಿದ್ಧವಾಗಿ ಹೇಳಿದೆ. ಹಿಂದೆ ಜ್ಞಾನಿಗಳಿಗೆ ಗಂಗಾ ಯಿದ್ದಲ್ಲಿ ಪ್ರತ್ಯಕ್ಷವಾಗಿದ್ದಾಳೆಂಬುವದೆ ಸಿದ್ಧ. ಇಲ್ಲಿ ಸಮಸ್ತ ತಾತ್ವಿಕರು ಶ್ರೀಕಾಂತ ನಿಂದ ಸಹವಾಗಿ ಇರುವರು ದೋಷ ನಿರ್ಲಿಪ್ತರು ಅನೇಕ ಜೀವರಾಶಿ ಗಳನ್ನು ಬಾಧಿಸುವ ಯಮುನು ಪುಣ್ಯವಂತನೆಂತ ಕರೆಸುತ್ತಾನೆ. (ಕಲಿಬಾಧೆಗೆ ಪಾಪಿಷ್ಟನು( ಯಾಕಂದರೆ ಮಡಿವಸ್ತ್ರ ಮೈಲಿಗೆ ಆತುಕೊಂಡರೆ ಅದು ಮಡಿ ಆಗಲಿಲ್ಲ ಇದರಂತೆ ಮೈಲಿಗೆ ವಸ್ತ್ರ ಮಡಿವಸ್ತ್ರ ತಾಕಿದರೆ ಮೈಲಿಗೆ ವಸ್ತ್ರ ವೆಂದು ಹೇಳುವರು) ಕಾರಣ ನೀಚೋಚ್ಚ ಭಾವ ವನ್ನು ತಿಳಿದು ಪ್ರವರ್ತಿಸಬೇಕು.

ಈ ಬರಹ ಪೂರ್ವಿಕರು ಬರೆದ ವಹಿಯಲ್ಲಿದೆ.

ಶ್ರೀ ಜಗನ್ನಾಥ ವಿಠ್ಠಲ

## ೨೮ ಪದ ನದಿಗಳ ತಾರತಮ್ಯ

ವಾರ್ಧಿಕ ಷಟ್ಪದಿ

ರಾಗ ಭೂಪಾಳಿ ತಾಳ ಝಂಪಿ

ಭಾಗಿರಥ್ಯಾದಿ ನದಿಗಳ ತಾರತಮ್ಯ ನಿಜ ।

ಭಾಗವತ ತಿಲಕ ನಿಮಿರಾಜಗೊಲಿದು ವಸಿಷ್ಠ |
ಯೋಗೀಶ ಪೇಳ್ದ ಸುಕಥಾ ಕುತೂಹಲವನನು |
ರಾಗದಲಿ ಕೇಳಿ ಜನರೂ ಆಯ್ಯಾ ||ಪಲ್ಲ||

ಒಂದಿನದಿ ಗೋದಾವರಿಯ ತಟದಿ ನಿಮಿರಾಜ |
ನಿಂದು ಯಜ್ಞವ ಮಾಡುತಿರಲಾಗ ಪರಮೇಷ್ಠಿ |
ನಂದನನೆನಿಪ ವಸಿಷ್ಠ ಮಹಾಮುನೀಶ ನಡೆತಂದ ಮೇಧಾಗಾರಕೆ ||
ಬಂದ ಯತಿವರನ ಮಣಿಪೀಠದಲಿ ಕುಳ್ಳಿರಿಸಿ |
ಗಂಧ ಪುಷ್ಪಾಕ್ಷತೆ ಸುಭೋಜನದಿ ಸತ್ಕರಿಸಿ |
ಮಂದಹಾಸದಲಿ ತನ್ನಯ ಮನೋವಾಂಛಿತವ ಸುಂದರಾಧಿಪ ಬಿನ್ನೈಸಿದ ||೧

ನೃಪತಿಪ ವಸಿಷ್ಠ ವೈಷ್ಣವಕುಲ ಶಿರೋರತುನ |
ಶ್ರುತಿಶಾಸ್ತ್ರ ಸರ್ವಜ್ಞ ಗಂಗಾದಿ ಪುಣ್ಯತೀ |
ರ್ಥ ತಾರತಮ್ಯ ಎನಗರುಪು ಕರುಣದಲಿ ಮತ್ಪತಿತ ನೆನುತ ಪದ-
ಕೆರಗುವ |
ಕ್ಷಿತಿಪ ನೋಕ್ತಿಯ ಕೇಳುತಾನಂದ ಶರಧಿಯೊಳು |
ಗತನಾಗಿ ರೋಮ ಹರ್ಷಣ ಕಣ್ಣೀರದಿ ಪುಳ |
ಕಿತಪಾದಪಾಗ ಕಾರುಣ್ಯದಲಿ ಯತಿವರನು ನತನೃಪಗಿಂತೆಂದನೂ ||೨||

ಕೇಳು ಜನನಾಥ ಮಹಭಾಗ ನಿನ್ನಯ ಪ್ರಶ್ನೆ |
ಪೇಳಿದಗೆ ಎನ್ನ ಸಂತೋಷ ಕಲ್ಪತರು ತ |
ಪ್ಪಾಲವಲುದಿಸಿ ಫಲೋನ್ಮುಖವಾಯ್ತು ಶಿಷ್ಯರೊಳು ಪಿರಿಯನೆ ಮಣಿ —
ನೀನಹುದಲಾ ||
ಮಾಲತಿ ಮೊದಲುಗೊಂಡು ನಿಖಿಳ ನದಿಗಳೊಳಿಪ್ಪ |
ಶ್ರೀಲೋಲನ ಸುಮೂರ್ತಿಗಳು ತಾರತಮ್ಯ ವಿ |
ಶಾಲವನು ನಿನಗೊರೆವೆ ಮನವ ಸಂಚಲಿಸದೆ ಯಿದಾಲಿಪುದು ನೀನೆಂದನೂ

ಹರಿಪಾದ ನಖದ ಸಂಸ್ಪರ್ಶ ಮಾತ್ರದಿಂದಲಿ |
ಸುರತರಂಗಿಣಿ ಶ್ರೇಷ್ಠಳೆನಿಸುವಳು ನದಿಗಳೊಳು |

ದರರಥಾಂಗ ಗದಾ ವಿಧೃತಪಾಣಿ ಮಾಧವನು ಘೊರೆಯನಿಪನಾತೀರ್ಥ ಕೇ
ಸರಿತಾಗ್ರ್ಯಗಣ್ಯ ಗೋದಾವರಿ ನಳಿನಿಗಿಂದ |
ಕೊರತೆ ಎಂದೆನಿಪ ಕ್ಕೈವತ್ತು ಗುಣದಲಿ ಶಂಖ |
ಚರಣ ಸುಗದಾಬ್ಜ ಶೋಭಿತ ವೀರ ನಾರಾಯಣರನೆನಿಪನಾಸಕಲಕೇ ||೪
ಹರಜ ಜಟೋದ್ಭವ ಕುಶಾವರ್ತಗೆ ಸಹಸ್ರಗುಣ |
ವರಳೆನಿ ಪಳಃಕೃಷ್ಣ ನಂದನದಿ ಚಾರು ಕಂ |
ಬು ರವಿ ವಾರಿಜ ಧನುರ್ಧಾರಿ ಯಮುನಾನದಿನಿಯಲಿ ವಿಹರಿಸುತಿಪ್ಪನಾ —
ಜಲದೊಳು ||
ತುರುಗಾಯ್ದ ದೇವನಂಗಜನಡಿಗೆ ಯಿಪ್ಪೈದು ||
ನೆರೆ ಗುಣ ವಿಹೀನ ವಾಗ್ದೇವಿ ಶರಧಿಯೊಳು ಪು |
ಷ್ಕರನಾಭ ಆ ಸರಸ್ವತಿ ಸಮಳು ಕಾವೇರಿ ಗೊರರಂಗ ನಾಥನೆನಿಪ ||೫||
ಆ ಯಮುಳ ನದಿಗಳಿಗೆರಡು ಗುಣಾಧಮ ಸರಯು |
ತೋಯಾಧಿಪತಿ ರಾಮ ಸರಯುಗೀರೊಂದು ಗುಣ |
ದೀಯಮುನೆ ಕಡಿಮೆನಿಪಳಲ್ಲಿ ದಾಮೋದರ ವಿಹಾಯಸಮಣಿ ತನಯಳ್ಗೆ ||
ಹೇಯ ವೆಂದೆಂಬೊ ರೊಂದೆರಡು ಗುಣ ನರ್ಮದ |
ಸ್ಥಾಯಕ ಚತುರ್ಬಾಹು ವಿಷ್ಣು ಕಾವೇರಿಗೆ |
ರಾಯಕೇಳ್ ವಾರಾಹಿಗಿರೊಂದು ಗುಣ ಕಡಿಮೆ ನಾಯಕ —
ಪರಹದೇವಾ || ೬ ||
ಸಿಂಧುಭವನಾಶಿನೀವರು ಸಮರು ಕ್ಷೀರಾಬ್ಧಿ |
ಮಂದಿರ ನೃಸಿಂಹದಲ್ಲಿಹರು ಭ ||
ವನಾಶಿನಿಗೆ |
ಸುಂದರ ಕುಮುದ್ವತಿಯು ಕಿಂಚಿದ್ಗುಣಾಧಮಳು ತಂದೆ ಯೆನಿಪ —
ತ್ರಿವಿಕ್ರಮಾ ||
ಒಂದೆನಿಸುವವು ನಾಲ್ಕುನದಿಗಳು ಗುಣಗಳಿಂದ |
ಮುಂದಿಹ ಪದದಿ ಪೇಳ್ವೆ ಪೆಸರು ಹರಿರೂಪ ನಲು |

ವಿಂದಾಲಿಸೀ ವರಾತೆನ್ನುತ ಕರುಣದಲಿ ಕರ್ಮಂದೀಶ ನಿಂತೆಂದನೂ ॥೭॥
ವಾಜಿವದನನು ವಂಶ್ಯರಾಸದಿ ಒಳಿಪನು ನವ ।
ರಾಜೀವನಯನ ಶ್ರೀಧರ ಭೀಮರಥಿಯೊಳ ಹಿ ।
ರಾಜ ಶಯನಾನಂತ ತಾಮ್ರಪರ್ಣಿಯೊಳಗೆ ವಿರಾಜಿಪ ಮಲಾಪಹಾರಿ
ಭಾಜನದೊಳಿಪ್ಪ ದುಷ್ಟ ಜನರ ಮರ್ದಿಸುವ ।
ಶ್ರೀಜನಾರ್ದನ ನಾಲ್ಕು ನದಿಗಳು ದ್ವಿಗುಣದಿಂದ ।
ಈ ಜಗತಿಯೊಳಗಧಮ ರೆನಿಸುತಿಪ್ಪರು ನಿತ್ಯ ನೈಜಭಕ್ತಿಜ್ಞಾನದೀ ॥೮॥
ಭೀಮರಥಿ ಸಮ ಪಿನಾಕಿಯೊಳಗೆ ಕೇಶವನು ।
ಭೂಮಿಯೊಳು ಪೃಥಕ್ ಸಾಗರವ ಕೂಡ್ವನದಿ ।
ಸಾಮಾನ್ಯ ವೆನಿಸವು ಪಿನಾಕಿಗೆ ತಮ್ಮೊಳು ಸಮಾಮಿತ ಸುಖಜ್ಞಾನದೀ
ಶ್ರೀಮನೋರಮ ಕೇಶವಾದಿ ರೂಪಗಳಿಂದ ।
ಸ್ವಾಮಿ ಯೆನಿಸುವನಲ್ಲಿ ಸ್ನಾನಾದಿ ಸತ್ಕರ್ಮ ॥
ಧೀಮಂತ ರಾಚರಿಸೆ ಪ್ರತಿದಿನದಿ ಧರ್ಮಾರ್ಥಕಾಮ ಮೋಕ್ಷಗಳೀವನೂ॥೯
ಈನದಿಗಳಿಗೆರಡು ಗುಣ ಪುಷ್ಕರಣಿ ನಿಜಯು ।
ಹೀನವೆನಿಸವು ಮೂರ್ತಿ ದತ್ತಾತ್ರಯನು ಕೃಷ್ಣ ।
ವೇಣಿಗೆ ಸಮಾನ ಚಂದ್ರನು ಸ್ವಾಮಿ ಪುಷ್ಕರಣಿ ಮಾನಸ ಸರೋವರ
ದೊಳು ॥
ಜ್ಞಾನಾತ್ಮ ವಾಮನನು ಶ್ರೀಭೂ ಸಹಿತ ಪ್ರಸಂ ।
ನಾನನಾಬ್ಜಾರಿ ದರ ಜಘನ ಸ್ಥಿತಾಭಯ ಸು ।
ಪಾಣಿ ವೆಂಕಟನ ಮಧುಸೂದನನ ತ್ರಿಸ್ಥಳದಿ ಘೇನಿಪುದು ನೃಪತಿಯೆಂದ
ದೇವ ಖಾತಗಳು ಶತಗುಣ ಕಡಿಮೆ ಮಾನಸ ಸ ।
ರೋವರಕೆ ಯಿತರ ಪುಷ್ಕರಣಿಗಳಿ ಗಲ್ಪಗುಣ ।
ಭಾವಿಸುವದಲ್ಲಿ ಸುಗದಾಧರನ ಪಾಪಿಗಳ ಪಾವನವ ಗೈವ ಕ್ಷುದ್ರ ।
ಪ್ರಾವಹಿಗಳೀರ್ವ್ಯೈದು ಗುಣ ಕಡಿಮೆ ಲಕ್ಷ್ಮೀ ।
ದೇವಿ ಪತಿ ನಾರಾಯಣನ ಚಿಂತಿಸೆಂದು ನೃಪ ।

ಗಾ ವಶಿಷ್ಠಮುನಿ ಪೇಳ್ದ ಶೀಘ್ರದಲಿ ಭವ ನೋವು ಪರಿಹರಿಪುದೆಂದು ೧೧
ಈ ಸಲಿಲ ವ್ಯಕ್ತಿಗಳಿಗೆರಡು ಗುಣದಿ ತಟಾಕ ॥
ಶೇಷ ಪರಿಯಂಕ ಅಚ್ಯುತ ನಿಹನು ಸಜ್ಜನರ ।
ದೋಷಗಳ ಕಳೆವ ಪಾಪಿಗಳಿಗೆರಡು ಗುಣಕಳಿಸಿ ಪಾವನಾಗಿಹನು ಚಕ್ರಿ ॥
ಘೋಷಗೈವ ದರಾಂಕ ರೂಪಗಳಿಂದಿರುಹ ಸ್ರ ॥
ಪೇಳ ನದಿಗಳ ತಾರತಮ್ಯ ರೂಪಗಳ ನೃಪ ।
ಪ್ರೇರಿಸಿದೆ ಸರ್ವವು ನಿನಗೆ ಮಹರಹಸ್ಯ ವಿದುಪಾಸನೆಯು ಗೈವದೆಂದು
ಈ ತೆರದಿ ನಿಮಿರಾಜ ಸೇವಗ ವಶಿಷ್ಠಮುನಿ ।
ತಾ ತಿಳಿಸಿದ ಕಥಾದಿಯುವರಿತು ವಿಬುಧರು ಧ ।
ರಾತಳದೊಳಿಪ್ಪ ತೀರ್ಥಗಳಲ್ಲಿ ಸ್ನಾನಜಪ ಪ್ರೀತಿಯಿಂದಾಚರಿಸಲಾ ।
ಶೀತಾಂಶು ಕಮಲಾಪ್ತ ರಜ್ಜನಕ ಸುರಪತಿ ನಿ ।
ಕೇತನದಿ ವಿವಿಧ ಭೋಗ ನಿತ್ಯ ಶ್ರೀಜಗ ।
ನ್ನಾಥ ವಿಠ್ಠಲ ಪಾಲಿಸ ಪನು ತನ್ನವರ ಸಂಪ್ರೀತಿಯಿಂದನುದಿನದಲಿ ॥೧೨

### ಶ್ರೀ ಜಗನ್ನಾಥ ವಿಠ್ಠಲ ವಿರಚಿತ

## ೨೯ ತಾರತಮ್ಯ ಗದ್ಯರೂಪ

ವಿಷ್ಣು ಸರ್ವೋತ್ತಮನು ಜೀವಜಡಾತ್ಮಕ ಜಗದತ್ಯಂತ ಭಿನ್ನ ಸಚ್ಚಿದಾನಂದ ಸ್ವರೂಪ ಮುಕ್ತಾಮುಕ್ತ ಸುರಗಣ ಸೇವಿತ ಲಕ್ಷ್ಮೀನಾರಾಯಣನಿಗೆ ಅನಂತಾನಂತ ನಮಸ್ಕಾರಗಳು ॥ ೧ ॥

ಆತನ ಪತ್ನಿ ಜ್ಞಾನಾನಂದ ಸ್ವರೂಪಳಾದ ಅನಂತಾನಂತ ಗುಣದಿಂದ ನಿಚಿತಳಾದ ಮಹಾಲಕ್ಷ್ಮೀ ದೇವೇರಿಗೆ ನಮಸ್ಕಾರ ॥ ೨ ॥

ಮಹಾಲಕ್ಷ್ಮೀ ಪುತ್ರರಾದ ಜಗದ್ಗುರುಗಳಾದ ಬ್ರಹ್ಮ ವಾಯುಗಳಿಗೆ.

ಅನಂತಾನಂತ ನಮಸ್ಕಾರಗಳು || ೩ ||

ವೇದಾಭಿಮಾನಿಗಳಾದ ಬ್ರಹ್ಮವಾಯುಗಳಿಗೆ ಸ್ತ್ರೀಯರಾದ ಸರಸ್ವತೀ ಭಾರತೀಯರಿಗೆ ಅನಂತಾನಂತ ನಮಸ್ಕಾರ ||೪||

ಬ್ರಹ್ಮವಾಯುಗಳಿಗೆ ಪುತ್ರರಾದ ಗರುಡ ಶೇಷ ರುದ್ರರಿಗೆ ಅನಂತಾನಂತ ನಮಸ್ಕಾರ ||೫||

ಶ್ರೀಕೃಷ್ಣ ಪತ್ನೀರಾದ ಜಾಂಬವತಿ ಕಾಳಿಂದಿ ಭದ್ರಾ ನೀಲಾ ಮಿತ್ರವಿಂದಾ ಲಕ್ಷ್ಮಣಾ ಈ ಆರು ಮಂದಿಗೆ ಅನಂತಾನಂತ ನಮಸ್ಕಾರ ||೬||

ಗರುಡ ಶೇಷ ರುದ್ರರಿಗೆ ಹೆಂಡರಾದ ಸೌಪರ್ಣಿ ವಾರುಣಿ ಪಾರ್ವತೀ ದೇವಿಯರಿಗೆ ಅನಂತಾನಂತ ನಮಸ್ಕಾರ || ೭ ||

ಸ್ವರ್ಗಾಧಿಪತಿ ಯಾದಂಥ ದೇವೇಂದ್ರಗೆ ಕಾಮರಿಗೆ ಅನಂತಾನಂತ ನಮಸ್ಕಾರ || ೮ ||

ಅಹಂಕಾರಿಕ ಪ್ರಾಣದೇವರಿಗೆ ಅನಂತಾನಂತ ನಮಸ್ಕಾರ || ೯ ||

ಇಂದ್ರ ಪತ್ನಿ ಶಚಿದೇವಿ ಕಾಮ ಪತ್ನಿ ರತಿದೇವಿಗೆ ಸ್ವಾಯಂಭು ಮನುವಿಗೆ ಬೃಹಸ್ಪತ್ಯಾಚಾರ್ಯರಿಗೆ ಕಾಮ ಪುತ್ರ ಅನಿರುದ್ಧಗೆ ದಕ್ಷಪ್ರಜೇಶ್ವರ ಈ ಆರುಮಂದಿಗೆ ಅನಂತಾನಂತ ನಮಸ್ಕಾರ ||೧೦||

ಕರ್ಮಾಧಿ ಪತಿಯಾದ ಪ್ರವಹ ವಾಯು ದೇವರಿಗೆ ಅನಂತಾನಂತ ನಮಸ್ಕಾರ ||೧೧||

ದೇವರ ಕಣ್ಣುಗಳಿಂದ ಹುಟ್ಟಿದ ಸೂರ್ಯದೇವರಿಗೆ ಮನಸ್ಸಿನಿಂದ ಹುಟ್ಟಿದಂಥ ಚಂದ್ರದೇವರಿಗೆ ಸ್ತನಗಳಿಂದ ಹುಟ್ಟಿದ ಧರ್ಮರಾಯರಿಗೆ ಸ್ವಾಯಂಭುವ ಮನು ಪತ್ನಿ ಶತರೂಪಾದೇವಿಗೆ ಅನಂತಾನಂತ — ನಮಸ್ಕಾರ ||೧೨||

ದೇವರ ಕುಕ್ಷಿಯಿಂದ ಹುಟ್ಟಿದ ಉದಕಾಭಿಮಾನಿ ಯಾದ ಸಮುದ್ರನಾಥ [ವರುಣ) ಗೆ ಅನಂತಾನಂತ ನಮಸ್ಕಾರ ||೧೩||

ಬ್ರಹ್ಮ ದೇವರ ಅಂಕೋದ್ಭವರಾದ ದೇವಋಷ್ಯೋತ್ತಮರಾದ

ನಾರದರಿಗೆ ಅನಂತಾನಂತ ನಮಸ್ಕಾರಗಳು ।೧೪।

ಹರಿ ಸರ್ವೋತ್ತಮತ್ವ ಸ್ಥಾಪಿಸಿದ ಭೃಗುಮುನಿಗೆ ದೇವ ಮುಖನಾದ ಅಗ್ನಿ ದೇವರಿಗೆ ದಕ್ಷಪತ್ನಿ ಪ್ರಸೂತಿಗೆ ಅನಂತಾನಂತ ನಮಸ್ಕಾರಗಳು ಗಾಧಿರಾಜನ ಮಗನಾದ ವಿಶ್ವಾಮಿತ್ರಗೆ ಬ್ರಹ್ಮಪುತ್ರರಾದ ಮರೀಚಿ ಅತ್ರಿ ಅಂಗಿರಸ ಪುಲಸ್ತ್ಯ ಪುಲಹ ಕೃತು ವಶಿಷ್ಠ ಋಷಿಗಳಿಗೆ ವೈವಸ್ವತ ಮನುವಿಗೆ ಅನಂತಾನಂತ ನಮಸ್ಕಾರ ॥೧೬॥

ಮಿತ್ರನಾಮಕ ಸೂರ್ಯನಿಗೆ ಗುರು ಪತ್ನಿ ತಾರಾ ದೇವಿಗೆ ಕೋಣಾಧಿಪತಿ ನಿರಋತಿಗೆ ಪ್ರವಾಹ ಪತ್ನಿ ಪ್ರಾವಹಿದೇವಿಗೆ ಅನಂತಾನಂತ ನಮಸ್ಕಾರ ।೧೭।

ದೇವ ಸೇನಾಧಿಪತಿ ವಿಷ್ವಕ್ಸೇನಗೆ ಅಶ್ವಿನೀ ದೇವತಿಗಳಿಗೆ ಗಣಪತಿಗೆ ಧನೇಶ್ವರನಾದ ಕುಬೇರನಿಗೆ ಅನಂತಾನಂತ ನಮಸ್ಕಾರ ॥೧೮॥

ಶೇಷಶತಸ್ಥರಿಗೆ ಏಕಾದಶ ಮನುಗಳಿಗೆ ಚವನ ಪುತ್ರರಿಗೆ ಉಚಿತ್ಥ್ಯ ಋಷಿಗಳಿಗೆ ಶುಕ್ರಾಚಾರ್ಯರಿಗೆ ಅನಂತಾನಂತ ನಮಸ್ಕಾರ

ಕಾರ್ತವೀರ್ಯ ಶಶಿಬಿಂದು ಮಾಂಧಾತ ಪ್ರಿಯವ್ರತ ಪರೀಕ್ಷಿತ ಅಂಬರೀಷಾದಿ ಕರ್ಮಜ ದೇವತಿಗಳಿಗೆ ಅನಂತಾನಂತ ನಮಸ್ಕಾರ ॥೧೯॥

ಭಾಗೀರಥಿಗೆ ಮೇಘಾಭಿಮಾನಿ ಪರ್ಜನ್ಯಗೆ ಸೂರ್ಯ ಪತ್ನಿ ಸಂಜ್ಞಾ ದೇವಿಗೆ ಶಶಿ ಪತ್ನಿ ರೋಹಿಣಿಗೆ ಯಮ ಪತ್ನಿ ಶಾಮಲಾ ವಿರಾಟ ಅಭಿಮಾನಿ ಉಷಾ ಅನಿರುದ್ಧ ಪತ್ನಿಗೆ ಅನಂತಾನಂತ ನಮಸ್ಕಾರ ॥೨೦

ತದುಪರಾಯ ಅನಾಖ್ಯಾತ ದೇವತಿಗಳಿಗೆ ಅಂ। ನಂ। ॥೨೧॥

ತಥಾ ಅಗ್ನಿಜಾಯಾ ಸ್ವಾಹಾದೇವಿಗೆ ಅನಂತಾನಂತ ನಮಸ್ಕಾರ ॥೨೨॥

ಜಲಾಪಾಂತ ಗಭಿಮಾನಿ ಬುಧಗೆ ಅನಂತಾನಂತ ನಮಸ್ಕಾರ ॥೨೩॥

ನಾಮಾಭಿಮಾನಿ ಉಷಾದೇವಿಗೆ ಅನಂತಾನಂತ ನಮಸ್ಕಾರ ॥೨೪॥

ಭೂಮ್ಯಾಭಿಮಾನಿ ಶನೈಶ್ಚರಗೆ ಅನಂತಾನಂತ ನಮಸ್ಕಾರ ॥೨೫॥

ಕರ್ಮಾಭಿಮಾನಿ ಪುಷ್ಕರಗೆ ಅನಂತಾನಂತ ನಮಸ್ಕಾರ ॥೨೬॥

ಇಲ್ಲಿ ಪರಿಯಂತ ಮುಖ್ಯ ಅಮುಖ್ಯ ತಾತ್ವಿಕರು
ತಥಾ ಅಜಾನಜ ದೇವತೆಗಳಿಗೆ ಅನಂತಾನಂತ ನಮಸ್ಕಾರ
ತುಂಬುರ ಮೊದಲಾದ ೧೦೦ ಗಂಧರ್ವರಿಗೆ
ಊರ್ವಶಿ ಮೊದಲಾದ ೧೦೦ ಜನ ಅಪ್ಸರ ಸ್ತ್ರೀಯರಿಗೆ
ಶತೋನ ಶತಕೋಟಿ ಋಷಿಗಳಿಗೆ ಅನಂತಾನಂತ ನಮಸ್ಕಾರ
ಅಗ್ನಿಪುತ್ರರಾದ ಕೃಷ್ಣ ಪತ್ನಿಯರು ೧೬ ಸಾವಿರ ನೂರು ಜನ ಗೋಪಿಕಾಸ್ತ್ರೀಯರಿಗೆ ಅನಂತಾನಂತ ನಮಸ್ಕಾರ
ತಥಾ ಕೃಷ್ಣಾಂಗ ಸಂಗಿಗಳಾದ ಗೋಪಿಕಾಸ್ತ್ರೀಯರಿಗೆ ಅ|ನಂ| |೨೭||
ತಥಾ ಚಿರ ಪಿತೃಗಳಿಗೆ ಅನಂತಾನಂತ ನಮಸ್ಕಾರ ||೨೮||
ತಥಾ ದೇವ ಗಂಧರ್ವರಿಗೆ ಅನಂತಾನಂತ ನಮಸ್ಕಾರ ||೨೯||
ತಥಾ ಮನುಷ್ಯ ಗಂಧರ್ವರಿಗೆ ಅನಂತಾನಂತ ನಮಸ್ಕಾರ ||೩೦||
ತಥಾ ಕ್ಷಿತಿಪರಿಗೆ ಮನುಷ್ಯ ರಾಜರಿಗೆ ಅನಂತಾನಂತ ನಮಸ್ಕಾರ |೩೧|
ಮನುಷ್ಯೋತ್ತಮರಿಗೆ ಅನಂತಾನಂತ ನಮಸ್ಕಾರ ||೩೨||
ಮನುಷ್ಯೋತ್ತಮರಲಿ ಮನುಷ್ಯೋತ್ತಮ ಮಧ್ಯಮರಿಗೆ ಅ|ನಂ|
ಮನುಷ್ಯೋತ್ತಮ ಅಧಮರಿಗೆ ನಮಸ್ಕಾರ
ತಥಾ ಮನುಷ್ಯ ಮಧ್ಯಮೋತ್ತಮರಿಗೆ ಅನಂತಾನಂತ ನಮಸ್ಕಾರ |
ಅಸ್ಮದ್ಗುರುಗಳಂತರ್ಯಾಮಿ ಪರಮಗುರುಗಳಂತರ್ಯಾಮಿ ತತ್ವದೇವಾಂತರ್ಯಾಮಿ ಉಮಾಮಹೇಶ್ವರಾಂತರ್ಯಾಮಿ ಹನುಮ ಭೀಮ ಮಧ್ವಾತ್ಮಕ
ಭಾರತೀ ರಮಣ ಮುಖ್ಯ ಪ್ರಾಣಾಂತರ್ಯಾಮಿ ಶ್ರೀ ಭೂದುರ್ಗಾರಮಣ
ರಾಮ ಕೃಷ್ಣ ರೂಪಾದಿ ಅನಂತ ರೂಪಾತ್ಮಕ ಸಚ್ಚಿದಾನಂದಾತ್ಮಕ
ಜಗನ್ನಾಥ ವಿಠಲಾತ್ಮಕ ಲಕ್ಷ್ಮೀ ನರಸಿಂಹ ಪ್ರಿಯತೋ ಭವತು
ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು



ಶ್ರೀ ವಿಜಯ ವಿಠ್ಠಲ

## ೩೦ ತಮೋಯೋಗ್ಯರ ತಾರತಮ್ಯ ಪ್ರಕರಣ ಸುಳಾದಿ

ರಾಗ ಪಂತುರಾವಳಿ ಧ್ರುವ ತಾಳ

ತಮೋ ಯೋಗ್ಯ ಜೀವರಾಶಿ ಅದರೊಳು ಗಣಸ್ಥರು |
ಅಮಿತ ನಾಗಿಪ್ಪರು ಲಿಂಗಸಹಿತ |
ಶಮ ದಮಗಳು ಯಿಲ್ಲ ನಿಜರೂಪ ಬಲು ಕಪ್ಪು |
ಕ್ರಮದಿಂದ ದುಃಖಾತ್ಮರು ಕೇಳಿ ಜನರೂ |
ತಮೋ ಯೋಗ್ಯರೊಳು ಕೇವಲ ಶ್ರೇಷ್ಠ ಕಲಿಯೆನ್ನಿ |
ಸಮನಿಲ್ಲ ಯಿವನ ದುಃಖಕ್ಕೆ ಎಂದಿಗೆ |
ತಮ ತಮಸಾನುಕಲಿ ಸ್ವಲ್ಪತರ ಸ್ವಲ್ಪಕ |
ಕ್ಷಮೆಯಾಗಿ ತತ್ವದಲ್ಲಿ ಯಿಪ್ಪ ಖಳರೂ |
ತಮ ರಾಕ್ಷಸರು ದೈತ್ಯ ಭ್ರಾತ್ಯಾನಾಖ್ಯ ದೈತ್ಯರು |
ತಮ ಸತ್ವದವರು ಮಾನವ ನೀಚರು |
ವಮನ ಮೂತ್ರ ಶೌಚ ಸ್ನಾನ ಹೇಸಿಕಿಗೆ ಈ |
ಸಮುದಾಯ ದವರು ಅಭಿಮಾನಿಗಳು |
ಉಮೇಯರಸನ್ನ ತನಕ ಕಲಿವ್ಯಾಪ್ತನಾಗಿ ವಿ |
ಭ್ರಮಣ ಗೊಳಿಸುವನು ಅಧಿಕಾಧಿಕ |
ಸುಮನಸ ಗಣಕೆ ಸ್ವಲ್ಪ ಯಿತ್ತು ಮುಂತಾದ ಮನುಜೋ |
ತ್ತಮ ತೃಣ ಜೀವಿಗಳಿಗೆ ಬಲು ಉಪದ್ರ |
ಕ್ರಮ ಗೆಡಿಸುವನಯ್ಯಾ ಸಾಧನ ಮಾಡಗೊಡ |
ಚಮತ್ಕಾರ ದಿಂದ ತನ್ನ ಬಳಗ ಮೊಡನೆ |
ಅಮರೇಂದ್ರನಲ್ಲಿ ಕಲಿ ದ್ವಾಪರ ನಿಪ್ಪನು |
ಕ್ರಮದಿಂದಲೊಬ್ಬ ರೊಬ್ಬ ರಧಿಕ ವೆನ್ನೂ |

ಸಮರಲ್ಲ ಯಿವರೊಳು ತರತಮ್ಯವೆ ವುಂಟು |
ಕುಮತಿ ಬುದ್ಧಿಗಳುಳ್ಳ ಸತಿಗಳಿಹರು |
ಪ್ರಮೆಯನ್ನು ಕೇಳುವರು ಇಳರೊಳು ಅಂತಿ ಅಂಶ |
ಸಮ ವಿಷಮವಾಗಿಪ್ಪವು ನೀಚೋಚ್ಚಾದಿ |
ಸುಮನೋಹರ ಜನವಲ್ಲ ಯಿವರಿಗೆ ನಾನಾ ಯೋಗ |
ಗಮನಾಗಮನೈಶ್ವರ್ಯಗಳು ಸಿದ್ಧಿಯಹುದು |
ಶ್ರಮವಲ್ಲದಿವರಿಗೆ ಪ್ರಾಂತಕ್ಕೆ ತೋಷ ಕೊಡವು |
ತಿಮಿರದಮೇಲೆ ತಿಮಿರ ಮುಸುಕಿದಂತೆ |
ತಮ ಪ್ರಾಚುರಲ್ಲೀಗ ಸಾಂಶ ನಿರಂಶ ರುಂಟು |
ಕ್ರಿಮಿ ಮೊದಲಾದ ಕಾಯ ಧರಿಸುವರೂ |
ಅಮರಗಂಗೆ ಮೊದಲಾದ ತೀರ್ಥ ಕ್ಷೇತ್ರಂಗಳಿಗೆ |
ನಮಿಸಿ ಸ್ನಾನಾದಿ ಕರ್ಮ ಮಾಡಲಾಗಿ |
ಸುಮತಿ ಕೊಡದು ಕಾಣೋ ಉನ್ಮತ್ತ ಭಾಗ್ಯನಾಗಿ |
ಪ್ರಮಥ ಪಾಪಗಳೆಸಗೆ ಅದರಿಂದಲಿ |
ರಮೆಯರಸನ್ನ ತದ್ಭಕ್ತ ದ್ವೇಷಕಾಪ |
ಕ್ರಮ ವಾಗುವದು ಸಿದ್ಧ ದಿನದಿನಕೆ |
ಕಮಲ ಸಂಭವ ನಿಂದ ಪುಟ್ಟಿದವರು ಪರಾ |
ಕ್ರಮ ಶಾಲಿಗಳು ನೀಚವೃತ್ತಿಯಲ್ಲಿ |
ಸಮರ ನಿರ್ಭೀತ ನಮ್ಮ ವಿಜಯ ವಿಠ್ಠಲ ರೇಯ |
ಯಮನಾಗಿ ತೋರುವ ತಾಮಸ ಜೀವಿಗಳಿಗೆ | ॥ ೧ ॥

ಮಟ್ಟ ತಾಳ

ಅನಾದಿ ಬದ್ಧ ಲಿಂಗಶರಿರವು ಜ್ಞಾ |
ನ ರಹಿತರಿಗಾವರಣ ವಾಗಿಪ್ಪದು |
ನಾನಾ ಕರ್ಮಗಳು ಉಣಿಸಿ ಕೊಳುತಲಿದ್ದು |
ಏನಂಬೆನೋ ಯಿದರ ಚಿತ್ರ ವಿಚಿತ್ರತರ |

ಜ್ಞಾನಿಗಳು ತಿಳಿದು ಯೆಣಿಸಿ ಗುಣಿಸಿನೋಡಿ ।
ಕಾಣರು ಕ್ಷಣಮಾತ್ರ ಸ್ವರೂಪ ಸುಖವನ್ನು ।
ದಾನವ ಕುಲವೈರಿ ವಿಜಯ ವಿಠ್ಠಲ ರೇಯನ ।
ಕಾಣುವರು ನವವಿಧ ಪ್ವೇಷವನು ಬಳಿಸಿ ॥ ೨ ॥

ತ್ರಿವಿಡಿ ತಾಳ

ಇವರ ಸ್ವರೂಪ ನೋಡಿವರೆ ಕೇವಲ ಕಪ್ಪು ।
ದಿವ ರಾತ್ರಿಯಲಿ ಬಿಡದೆ ದುಃಖಾತ್ಮರು ।
ಹವಣವನ್ನೆ ಕೇಳು ತಪುಚಿತು ಕಾಯುಕ್ಕೆ ।
ತ್ರಿವಿಧ ಕಾರಣ ಪ್ರಕೃತಿ ಆವರ್ಣವು ॥
ಧವಳ ವರ್ಣವೆ ಕೊನಿಗೆ ರಕ್ತವರ್ಣವೆ ಮಧ್ಯ ।
ರವಿ ಯಿಲ್ಲದ ವರ್ಣ ಪ್ರಥಮದಲ್ಲಿ ।
ನವಸಪ್ತಕಳೆ ವುಳ್ಳದೇಹ ತ್ರಿ ಪರಿಚ್ಛೇದ ।
ನಿವಹ ಪರಮಾಣು ಅತಿಸೂಕ್ಷ್ಮ ॥
ತವಕ ದಿಂದಲಿ ಅಲ್ಲಿ ಸಿರಿ ಮೂರು ರೂಪದಲ್ಲಿ ।
ಭವದೂರಳಾಗಿ ಶ್ರೀ ಭೂ ದುರ್ಗಾ ಖ್ಯಾ ।
ಪವಮಾನ ಬ್ರಹ್ಮದೇವರು ವಾಣಿ ಭಾರತಿ ।
ಇವರು ನಾಲ್ವರಲ್ಲಿ ತ್ರೀ ರೂಪವಿ ನವನವ ।
ಸಂಖ್ಯ ದಿಂದ ಅಭಿಮಾನಿಗಳಾಗಿ ।
ಭವದೊಳ ಗವರಿಗೆ ವೃತ್ತಿ ಜ್ಞಾನ ರೂಪ ।
ವಿವಿಧ ಬಗೆಯನ್ನು ಮಾಡಿಸುವರು ।
ಲವಲವಿಕೆಯಿಂದಲಿ ಭೇದಾಭೇದ ಸಂತೋ ।
ಪವನು ಕ್ಲೇಶವನು ತಜ್ಜೀವಕ್ಕನು ।
ಭವಕೆ ತಂದುಕೊಟ್ಟು ಸಾಧನ ಮಾಡಿಸಿ ।
ಭವಣೆ ಯೊಳಗೆ ಹಾಕಿ ಬಿಡುವರಯ್ಯ ।
ಇವರಿಗೆ ಪ್ರೇರಕ ಸರ್ವ ಸ್ವತಂತ್ರನು ।

ತ್ರಿವಿಧ ರೂಪದಿ ಆ ಲಿಂಗದಲಿ ಶಿವ ಬ್ರಹ್ಮ ವಿಷ್ಣುವೆಂಬೊ ನಾಮಗಳಿಂದ
ಜವದಲ್ಲಿ ಬಾಲನಂತೆ ಆಡುತ್ತ ।
ದಿವಿಜ ವೈರಿಗಳನ್ನು ಕಾಣಿದಾಡಿಸುವ ಕೇ ।
ಶವ ರಂಗ ತನುರಂತಿ ರೂಪದವನೋ ।
ಅವಿದ್ಯಾತ್ಮಕದೇಹ ತಾವಾಸ ಜನಕೆನ್ನಿ ।
ಏವರ ವಿದರೊಳಗುಂಟು ಹೆಚ್ಚುಕಡಿಮೆ ।
ಭುವನದೊಳಗೆ ಖಳರು ಅಂಶದಿಂದಲಿ ಜನಿಸಿ ।
ಅವನಿ ಪತಿಗಳಾಗಿ ನಾನಾ ಭೋಗ ।
ಸವಿಯಾಗಿ ಸವಿದುಂಡು ಸುಖಿಸುವರಿವರಕೆಲ್ಲ ।
ದ್ವಿಜರಾವೇಶ ವುಂಟಾದುವರಿಂದ ।
ಅವಗುಣ ದವರಿಗೆ ಸುಖವಾಗದೆಂದರಿ .
ಇವರಿಗುಂಟು ಭೇದಾಭೇದ ಬಗೆಯು ।
ಪವಮಾನ ವಿಕಲ್ಪದ ಜನಕೆ ಸುಖ ವುಂಟು ಮಾ ।
ಧವನ ಯಿಚ್ಛೆ ಯಿಂಥದೆನ್ನಿ ಸ್ತುತಿಸಿ ।
ಶಿವ ವಂದಿತ ನಮ್ಮ ವಿಜಯ ವಿಠ್ಠಲ ರೇಯ ।
ಸುವಿರುದ್ಧ ಕರ್ಮವ ಮಾಡಿಸುವ ಖಳರಿಂದ ॥ ೩ ॥

ಅಟ್ಟ ತಾಳ

ಪ್ರಾರಬ್ಧ ಸುಖ ದುಃಖ ಯಿಷ್ಟಾನಿಷ್ಟ ಕರ್ಮ ।
ಕ್ರೂರಿಗೆ ವುಂಟು ವೃತ್ತಿಜ್ಞಾನವನ್ನು ।
ಹಾರುವ ಪರಿಯಂತ ಮಿಶ್ರಭಾವ ವೆನ್ನಿ ।
ಸಾರಿಸಾರಿಗಿದೆ ಕಲ್ಯಾದಿಗನುಭವ ।
ಸಾರುವೆನು ಯಿಷ್ಟ ಪುಣ್ಯ ನಿರ್ಜರರಿಗೆ ।
ಸೇವನದನಿಷ್ಟ ಪಾಪ ತದ್ಗಣಕ್ಕೆ ।
ಧಾರುಣಿ ಯೊಳು ಪುಟ್ಟಿ ದುಷ್ಟ ಸಾಧನದಿಂದ ।
ಬ್ಯಾರೆ ಪೊಂದೊಂದು ಅಂಶಗಳು ತಮ್ಮ ಮೂಲ ।

ಶರೀರ ಕೂಡದೆ ಮೂರು ವಿಧ ಮಹ।
ಘೋರ ನರಕದಲ್ಲಿ ಬಿದ್ದು ಸಲಿಂಗದಿ।
ಮೋರೆ ಯಿಲ್ಲದೆ ದಃಖ ಬಡುವರು ತುದಿಯಲ್ಲಿ।
ವಾರಿಜ ಭವನನ್ನ ದಿನ ಕಲ್ಪಕ್ಕೆ ಯಿಂತು।
ಏರುವ ಬಗೆಯಿಂದ ವೃತ್ರರೋತ್ತರ ಅಧಿ।
ಕಾರಿ ಗಳಾದ ದೈತ್ಯರಿಗೆ ಕೇವಲ ಮೂಲ।
ಸ್ವರೂಪ ಸರ್ವ ಅಂಶಗಳು ಯೇಕವಾಗಿ।
ಶಾರದಾ ಪತಿಯ ಕಲ್ಪಕೆ ನಿತ್ಯ ತನುದಲ್ಲಿ।
ಮಾರುತ ನಿಂದಲಿ ಲಿಂಗ ರಹಿತರಾಗಿ।
ದಾರಣದಲಿ ಬಳಲುವ ಸ್ವಭಾವರು।
ಕಾರಣ ಕರ್ತ ನಮ್ಮ ವಿಜಯ ವಿಠ್ಠಲ ರೇಯ।
ಚಾರು ವಿಲಾಸದಿ ದುರುಳರ ಕೆಡಿಸುತಿಪ್ಪ ॥ ೪ ॥

ಆದಿ ತಾಳ

ಅಸಂಸ್ಪೃಷ್ಟ ತತ್ವದಲ್ಲಿದ್ದ ದೇವತೆಗಳಿಗೆ।
ಅಸುರಾವೇಶವೆ ಯಿಲ್ಲ ಕರ್ಮದ ತೊಡಕು ಯಿಲ್ಲ।
ಬಿಸಿಜ ಜಾಂಡ ದೊಳಗೆ ಯಿದ್ದ ಅಂಶಿ ಅಂಶಕ್ಕೆ।
ಪಶು ಪತಿ ವಿಡಿದು ತೃಣಾದ್ಯ ಜೀವ ಪರಿಯಂತ।
ಘಸಣೆ ಗೊಳಿಸುವರು ಖಳರು ಮತ್ತೆ ಪ್ರಬಲ।
ವಸುಕುತಿಪ್ಪ ಪ್ರಾರಬ್ಧ ಸೂತಕ ದಿಂದಲಿ।
ಹಸನಾಗಿ ಕೇಳು ಯಿತ್ತ ಅಥವಾ ದೈತ್ಯಾವಳಿಯು।
ಬೆಸನ ತಮ್ಮ ತಮ್ಮ ಸಾಧನ ಪೂರ್ಣವಾಗೆ।
ಮುಸಗಿ ಮತ್ಸರಿಲಿ ಅಲ್ಪ ದ್ವೇಷ ಯುಕ್ತರಾಗಿ।
ಕುಶಲ ಕಾಣದಲಾ ತಮಸಿನ ಪ್ರದೇಶದಲ್ಲಿ।
ವಸತಿಯಾಗಿಪ್ಪರು ಕಲಿಬಾಹೋ ಪರಿಯಂತ।
ಪುತಿಯಲ್ಲ ಸರ್ವರಿಗೆ ಆಸ್ಯಾಲೆ ನಿತ್ಯ ದುಃಖ।

ಪ್ರಸರ ಕ್ರಮಾನುಸಾರ ದುರ್ಲಕ್ಷಣಂಗಳುಂಟು |
ಪಶ್ವಾದಿ ಯೋನಿ ಭೇದ ಯೆಂಭತ್ತು ನಾಲ್ಕು ಲಕ್ಷ |
ಅಸುರ ರೊಳಗೆ ವೊಂಟು ಯಿವರ ಕ್ರೀಡೆಗೋಸುಗ |
ಎಸವ ಶುದ್ಧ ತಮೋರಾಶಿ ಪ್ರತ್ಯೇಕವದೆ ತಾ |
ವುಸ ಮುಕ್ತರೆಲ್ಲ ಕೂಡಿ ಕ್ಲೇಶ ದಿಂದಾಡುವರು |
ಅಸುರಾರಿ ಮಹಿಮೆ ಎಂತೊ ಪೊಗಳಲು ಬೊಮ್ಮಾದ್ಯರಿಗೆ |
ವಶವಲ್ಲ ವಶವಲ್ಲ ಯಿಚ್ಛಾಶಕ್ತಿಗೆ ನಮೊ |
ಶ್ವಸನ ದೂತರೆ ಯಿವರಿಗೆ ಶಿಕ್ಷಾ ಕರ್ತರು ಬಾ |
ಧಿಸುವರು ನಾನಾಪ್ರಕಾರ ತಡವಿಲ್ಲದಲೆ |
ಅಸುರ ತೃಣ ಜೀವಂಗೆ ವೊಂದು ದಿವಸ ನೀರು |
ಅಶನ ಹಾಕದೆ ಭಾರ ಹೇರಿಸಿ ಕೊಂಡು ನೈದು |
ಬಿಸಲೊಳಗೆ ಕಟ್ಟಿರಿಸಿ ಸುತ್ತ ವುರಿಯ ಹಾಕಿ |
ಹಸಿಯು ಬರಿಗೆ ಯಿಂದ ಕೊಲ್ಲಲಿನಿತು ದುಃಖ |
ವಿಸುಕದಲೆ ಯೂನುವದು ವೆಗ್ಗಳವಾಗಿ ಗು |
ಣಿಸುವದು ಕಲಿಗೆ ಅಪ್ರತಿಯಾದ ಅಮಿತ ದುಃಖ |
ವೃಷಭ ವಾಹನ ಯಿಂಥ ಅಯೋಗ್ಯರಿಗೆ ವುಪದೇ |
ಸಿಸಿದ ಕಾಣಿರೊ ಬಹು ಮೋಹಕ ಶಾಸ್ತ್ರದಿಂದ |
ಬಿಸಿಜ ಸಂಭವನಯ್ಯ ವಿಜಯ ವಿಠ್ಠಲ ರೇಯ |
ದ್ವೇಷಿಗಳ ನೋಡಿನಗುವ ನಿರ್ದೋಷ ಗುಣ ಸಾಂದ್ರ || ೫ ||

ಜತೆ

ಅಂಧನ್ನ ತಮಸಿಗೆ ಸಾಧನ ಸರ್ವದಲಿ |
ಕುಂದದೆ ಮಾಳ್ಪರು ವಿಜಯ ವಿಠ್ಠಲ ಬಲ್ಲ || ೬ ||



ಮೋಹನ ವಿಠಲ

೩೧ ಸ: ಳ. ದಿ

## ಧ್ರುವ ತಾಳ

ಹರಿಯೆ ಸರ್ವೋತ್ತಮ ಸಿರಿಯು ಆತನರಾಣಿ ।
ಸರಜಿಜೋದ್ಭವ ಮರುತ ಪುತ್ರರೈಯ್ಯಾ ।
ಸರಸ್ವತಿ ಭಾರತಿ ಗರುಡ ಶೇಷ ರುದ್ರ ।
ಹರಿಯರಾಣಿಯರು ನಾಲ್ಕೆರಡು ಷಂಧಿ ಸೌ ।
ವರಣಿ ವಾರುಣಿ ಗಿರಿಜಾ ಸುರಪತಿ ಕಾಮಾದ್ಯರ ।
ತರತಮ್ಯ ಜ್ಞಾನದಿಂದ ತಿಳಿಯಬೇಕು ।
ಸುರನದಿಪಿತ ನಮ್ಮ ಮೋಹನ್ನ ವಿಠ್ಠಲ್ಲ ।
ಶರಣು ನೆನಿಸಿದವರಿಗೆ ಯಿನ್ನು ಸರಿಯುಕಾಣೆ ॥ ೧ ॥

### ಮಟ್ಟ ತಾಳ

ಜೀವ ಜೀವಕೆ ಭೇದ ಜಡಜಡಕೆ ಭೇದ ।
ಜೀವ ಜಡಕೆ ಭೇದ ಹರಿಗೆ ಜಡಕೆ ಭೇದ ।
ಜೀವ ಈಶಗೆ ಭೇದ ದೇವ ನಾರಾಯಣನ ।
ಭಾವಕ್ರಿಯ ಗಳಿಗೆ ಅಭೇದವನ್ನು ತಿಳದು ।
ಶ್ರೀವಲ್ಲಭ ನಮ್ಮ ಮೋಹನ ವಿಠಲನ್ನ ।
ಪಾವನ್ನ ಚರಣನಾಮ ತೀವ್ರದಲಿ ಭಜಿಸು ॥ ೨ ॥

### ತ್ರಿವಿಡಿ ತಾಳ

ಹರಿಯು ತನಗೆ ಬೇಕಾದವನ ಮನಸು ।
ಎರಗಲೀಸನು ಅನ್ಯ ಸತಿಯರಲ್ಲಿ ।
ಎರಗಿಸಿದರೆ ಬೇಗ ತಿರುಗಿಸುವನಯ್ಯ ।

ತಿರುಗಿಸದಿದ್ದರೆ ಬೆರೆಯಲೀನ |
ಬೆರದರೆ ಬೆರೆಯಲಿ ರತಿಯು ಪುಟ್ಟಲೀನ |
ರತಿ ಪುಟ್ಟಿದರೇನು ಕಾಕು ಮಾಡಲೀಸನಯ್ಯ |
ಕರುಣಾಸಾಗರ ನಮ್ಮ ಮೋಹನ ವಿಠಲನ |
ಚರಣವನು ತೀವ್ರದಲಿ ಭಜಿಸೋ ಭಜಿಸೊ ॥ ೩ ॥

ಅಟ್ಟ ತಾಳ

ಮಾರುತ ಮತವ ಪೊಂದಿ ಹರಿಯೆ ಪರನೆಂದು |
ಗುರು ಹಿರಿಯರ ಚರಣಕ್ಕೆರಗು ಆವಾಗಲು |
ಹರಿಕಥಾಮೃತವ ಕರ್ಣದಿಂದಲಿ ಕೇಳು |
ಹರಿ ನಿರ್ಮಾಲ್ಯವ ಸಿರದಲ್ಲಿ ಧರಿಸುತಿರು |
ಹರಿ ನೈವೇದ್ಯವ ಹರುಷದಲ್ಲಿ ಭುಂಜಿಸು |
ಹರಿ ದಾಸರ ಕೂಡ ತಿರುಗು ಊಳಿಗನಂತೆ |
ಹರಿ ಅವತಾರ ಸಿರಿ ಮೋಹನ ವಿಠ್ಠಲ್ಲ |
ಹರಿಯೆ ತ್ರಿಭೂವನ ಧೊರೆಯೆಂದು ತಿಳಿಯೊ ॥ ೪ ॥

ಆದಿ ತಾಳ

ತನಗೆ ಬೇಕಾದವನು ಉನ್ನತ ಪಾಪವ ಮಾಡೆ |
ದಾನವರಿಗೆ ಕೊಡಿಸಿ ಪುಣ್ಯ ಭಕ್ತರಿಗೀವ |
ಘನ್ನ ಮಹಿಮ ಲಕುಮಿಯನ್ನು ಬಿಟ್ಟರೆ ಬಿಡನು ಪ್ರ |
ಪನ್ನರ ಬಿಡೆನೆಂಬ ಚಿನ್ಮಯ ಮೂರುತಿ |
ಪನ್ನಗಾದ್ರಿ ನಿಲಯ ಮೋಹನ್ನ ವಿಠಲನ್ನ |
ಸನ್ನುತಿಸುವರಿಗೆ ಯಾರ್‍ನ ಸರಿಯು ಕಾಣೆ ॥ ೫ ॥

ಜತ್ತೆ

ತಾರತಮ್ಯ ಪಂಚ ಭೇದ ತಿಳಿಯದವಗೆ |
ಮಾರುತೀ ಪ್ರಿಯ ಮೋಹನ ವಿಠ್ಠಲ ಪೊಲಿಯಾ ॥ ೬ ॥

ಶ್ರೀಪ್ರಾಣೇಶ ವಿಠ್ಠಲ ವಿರಚಿತ

## ೩೨ ಪಂಚಭೇದ ತಾರತಮ್ಯ

ಈಶ ಜೀವ ಜಡಗಳ ನಿಜ ಸ್ವರೂಪ ಜೀವರ ತ್ರೈವಿಧ್ಯ ಸತ್ವ ರಜೋ ತಮೋ ಜೀವರ ಲಕ್ಷಣ ಜಡಗಳಲ್ಲಿರುವ ವೈಲಕ್ಷಣ್ಯ ಮತ್ತು ಭೇದಾದಿಗಳು.

ರಾಗ ಕಾಂಬೋದಿ ಝಂಪಿ ತಾಳ

ಪಂಚ ಭೇದವ ತಿಳಿದು ಪ್ರತಿದಿನದಲಿ ।
ಮುಂಚಿನಜ ಮಧ್ವಮುನಿ ಮತವನನುಸರಿಸಿದವರು ॥ಪಲ್ಲ॥
ಜೀವೇಶರಿಗೆ ಭೇದ ಜೀವ ಜೀವಕೆ ಭೇದ ।
ದೇವರಿಗೆ ಜಡಕು ಜಡಕೆ ಭೇದ ॥
ಆವಾಗ ಜೀವರಿಗೆ ಜಡಗಳಿಗೆ ಭೇದುಂಟು ।
ಈವಿವರ ಪೇಳ್ವೆ ಯೆನ್ನಾಪನಿತು ಕೇಳುವದು ॥ ೧ ॥

ಈಶನ ಸ್ವರೂಪ ಲಕ್ಷಣ

ಈಶ ನಿತ್ಯ ಅನಾದಿ ಸ್ವರತ ಸರ್ವಗ ಸ್ವಪ್ರ ।
ಕಾಶ ಸರ್ವಜ್ಞ ವಿಶ್ವ ವಿಲಕ್ಷಣ ॥
ಮೋಶ ಅಪರಿಚ್ಛಿನ್ನ ಮೂರ್ತಿ ಪ್ರಾಣಿಗಳಿಂದ ।
ತಾ ಸಾಕ್ಷಿಯಾಗಿ ಬಹು ಕರ್ಮಗಳ ಮಾಡಿಸುವ ॥ ೨ ॥
ಶ್ರೀಮುಖ ಜಗತ್ಯಕುತ್ಪತ್ತ್ಯಾದಿ ಕಾರಣ ಮ ।
ಹಾ ಮಹಿಮ ಸರ್ವತಂತ್ರ ಸ್ವತಂತ್ರ ।
ಆಮಯ ವಿದೂರ ಜ್ಞಾನಾನಂದ ಬಲ ಪೂರ್ಣ ।
ಸೀಮೆ ಯಿಲ್ಲದ ಸುಗುಣ ಕ್ರಿಯಾತ್ಮಕ ಸ್ವರೂಪ । ॥ ೩ ॥

## ಜೀವರುಗಳ ಸ್ವರೂಪ

ಸುಖ ದುಃಖ ಭೋಗಿ ಜೀವನು ಅಸ್ವತಂತ್ರ ಬಹು |
ಕಲುಲಾತಿ ವುಳ್ಳವನು ದುರ್ವಿಷಯದಿ ||
ಲಕುಮಿಶನಲ್ಲಿ ಭಕ್ತಿ ವಿವರ್ಜಿತನು ಪ್ರತಿ ಕ್ಷ |
ಣಕೆ ಅನಂತ ಅಪರಾಧಿ ಜನ್ಮ ಮೃತಿ ವುಳ್ಳವನು | ೪ ||
ಆಧಿ ವ್ಯಾಧಿಗಳಿಂದ ಪೀಡಿತನು ಅಜ್ಞಾನಿ |
ಮಾಧವನ ಬಂಧಕ ಶಕುತಿ ಯೊಳಗಿಹ್ಯ |
ತಾ ಧರಿಸಿಹನು ಪ್ರಾಕೃತಾ ಪ್ರಾಕೃತಾ ವರಣ |
ಭೇದವೇ ಸಿದ್ಧ ಯಿಂಥ ಜೀವರಿಗೂ ಹರಿಗೂ || ೫ |

### ಜೀವಭೇದ ಸತ್ವ ಜೀವರ ಲಕ್ಷಣ ಮತ್ತು ತರತಮ

ಒಂದಲ್ಲ ಸರ್ವ ಜೀವರು ಸತ್ವರಜ ತಮರು |
ಯೆಂದು ಭೇದಳುಂಟವರ ತರತಮ ||
ಮುಂದಿನ ಪದದಿ ಪೇಳ್ವೆ ಸಜ್ಜನರು ಕೇಳಿ ಯಾ |
ನಂದ ಬಡಲೆಂದು ವಿನಯದಲಿ ಬಿನ್ನೈಸುವೆನು | ೬ ||
ಭಿನ್ನ ಭಕ್ತರು ಯೆನಿಪ ರೆಲ್ಲ ದೇವತೆಗಳ |
ಚ್ಛಿನ್ನ ಭಕ್ತರು ವಿಧಿರವರ್ಹೊಂಡರೂ (ಅವರ ಹೆಂಡರು) ||
ಚನ್ನಾಗಿ ಮುದದಿ ಈ ನಿರ್ಜರರ ತರತಮ್ಯ |
ವನ್ನು ಕೇಳಿಕೊ ಜೀಕು ಜ್ಞಾನಿಗಳ ಮುಖಧಿಂದ || ೭ ||
ವಿಧಿಮೊದಲು ತೃಣ ಜೀವ ಪರಿಯಂತ ಸಾತ್ವಿಕರು |
ಇದರೊಳಗೆ ದೇವ ಋಷಿ ಪಿತೃ ಪ ನರರು ||
ಸುಧಿಗೆ ಯೋಗ್ಯರಜಾಧಿ ಗೀರ್ವಾಣ ಗಂಧರ್ವ |
ತುದಿಯಾಗಿ ಸಾಂಶರು ನಿರಂಶರುಳಿದವರೆಲ್ಲ || ೮ ||

### ರಾಜಸರಾದ ನಿತ್ಯ ಸಂಸಾರಿ ಜೀವರ ಲಕ್ಷಣ

ಇವರಿಂದ ಭಿನ್ನ ರಾಜಸರು ಗೋ ಭೂ ನರಕ |

ತ್ರಿವಿಧ ಗತಿ ಯುಳ್ಳವರು ಪಂಚಭೇದ |
ವಿವರ ತರತಮ ದೇವರ ಮಹತ್ಮೆಯನು ಅರಿಯ |
ದವರು ಲಿಂಗಕಳೆಯರು ಧಾಮತ್ರಯ ಪೊಗದವರು ||೯||

ತಾಮಸ ಜೀವರುಗಳ ಸ್ವರೂಪ ಲಕ್ಷಣ

ಸಂಸಾರಿಗಳಿಗೆ ಭಿನ್ನರು ತಮೋ ಗುಣ ದವರು |
ಕಂಸಾರಿಯಲಿ ದ್ವೇಷವರಸ್ವಭಾವಾ |
ಅಸುರಾರಿಗಳು ನಾಲ್ಕು ಪ್ರಕಾರ ದೈತ್ಯ ರಾ |
ಕ್ಷಸರು ಪಿಶಾಚ ರಪರನುಗರು ನರಾಧಮರು ||೧೦||
ಈ ನಾಲ್ಕು ಬಗೆಯು ಸುರರಿಗೆ ಅರಸು ಕಲಿಯುವನ |
ಹೀನತನ ವೆಪ್ಪುವರಲಿ ಮಿಥ್ಯಾ ||
ಜ್ಞಾನಿ ಭೇದವನರಿಯ ಪಂಚ ಮಹ ಪಾತಕಿ ಪು |
ರಾಣ ವೇದಗಳಿಗೆ ವಿರುದ್ಧಾರ್ಥ ಕಲ್ಪಿಸುವ ||೧೧||
ಸುಜನ ರಾಚರಣೆ ನಡೆಯಗುಡ ದುಃಖ ಬಡಿಸುವ |
ಕಜನರಿಗನೇಕ ಬಗೆ ಸಹಯ ಮಹನೂ |
ಪ್ರಜಗಳನ ರೋಗನಾವೃಷ್ಟಿ ಯಿಂದಣಿಸುವನು |
ವೃಜನವನ ವಪು ತಾಯಿ ತಂಗಿ ಯಂಬರ ನರಿಯ ||೧೨||
ಬವರ ಬಂಗಾರ ದ್ಯೂತಾಪೇಯ ಅನೃತ ನಟ |
ಯುವತಿ ಯಿಾ ಯಾರು ಸ್ಥಳ ನಿಲಯವವಗೆ ||
ನವವಿಧ ದ್ವೇಷಿಗಳಿಗಾಕಾರ ನೆನಿಸುವನು |
ಆವನ ಸಮ ಪಾಪಿಗಳು ಮೂರು ಲೋಕದಲಿಲ್ಲ ||೧೩||
ಆ ನೀಚನ ಮಲ ಮೂತ್ರ ವಿಸರ್ಜನದಿ ಘೋರ |
ಕಾನನದಿ ಕತ್ತಲಿಯೊಳಗೆ ಸ್ಮರಿಪುದು ||
ಕ್ಷೋಣಿ ಯೆಳವನ ನಿಂದ್ಯ ಸಿರುತದಲಿ ಮಾಡುವದೆ |
ಶ್ರೀನಾಥ ನರ್ಚನೆ ಮಹಾಯಜ್ಞ ವೆನಿಸುವದು ||೧೪||

## ಅನಾದಿಯಿಂ ಜೀವರ ತ್ರೈವಿಧ್ಯ

ಈ ವಿಧದಿ ಮೂರು ಗುಣ ದಿಂದ ಪರಸ್ಪರ ಜೀವ |
ಜೀವರಿಗೆ ಭೇದ ಯೋಗ್ಯತೆ ಪ್ರಕಾರ ||
ಮೂವರಿಗೆ ಪಾಪ ಮಿಶ್ರಿತ ಕರ್ಮ ಪುಣ್ಯ ಬಹು |
ನೋವು ಸ್ವರ್ಗ ನರಕ ಸು ಮೋಕ್ಷಾದಿ ಗತಿಯುಂಟು ||೧೫||

ನಿತ್ಯಾನಿತ್ಯ ಜಡಗಳ ವಿವರ ಮತ್ತೆ ಭೇದ |

ಈ ಜೀವರಿಗೆ ವೃಕ್ಕನುಭವ ಜಡಗಳಿಗಿಲ್ಲ |
ನೈಜವಾದಿತು ಭೇದ ಜೀವ ಜಡಕೆ ||
ಆ ಜಡ ತ್ರಿ ನಿತ್ಯ ಅನಿತ್ಯ ನಿತ್ಯಾನಿತ್ಯ ||
ನಾಜಡವು ಅವ್ಯಾಕೃತ ನಭ ಶ್ರುತಿ ವರ್ಣಗಳು ||೧೬||
ಪ್ರಾಕೃತ ವಿಕೃತ ವೈಕೃತ ತ್ರಯ ಅಸ್ಥಿರ ಜಡವು |
ಪ್ರಾಕೃತ ವಜ್ರಾಂಡಘೋರ ಆವರಣವು |
ಸ್ವೀಕೃತ್ವೈವತ್ತು ಕೋಟ್ಯೋಜನ ಸಂಪೂರ್ಣಾತ್ಮ ||
ಕಾಕ್ರಮಿಸಿಹದ ಜಾಂಡಕಿದು ವಿಕೃತ ಜಡವೆಂದು ||೧೭||
ಸರಸಿಜ ಭವಾಂಡದೊಳಿಹ ನೆಲ ಜಲಧಿ ಗಿರಿಗಳು |
ಎರಡೇಳು ಭುವನ ವೈಕೃತ ಜಡವಿದು ||
ಸ್ಥಿರ ಅಸ್ಥಿರ ಜಡತ್ರಯ ಪುರಾಣಗರ್ಥ |
ಇರುತಿಹವು ಅಚಲಾಗಿ ಶಬ್ದಗಳನಿತ್ಯಾ ||೧೮||
ಮೂಲ ಪ್ರಕೃತಿಗತ ತ್ರಿವಿಧಾನಂತ ಪರಮಾಣು |
ಜಾಲ ಕಾರಣ ಸುಸ್ಥಿರ ವೆನಿಸವೂ ||
ವ್ಯಾಳಿ ಅದರಿಂದಾದ ತತ್ವಗಳ ನಿತ್ಯ ಮಹ |
ಕಾಲ ವೆಂದಿಗುನಿತ್ಯ ಅಣುಕಾಲಗಳನಿತ್ಯ ||೧೯||
ಹೀಗೆ ಮೂರು ವಿಧ ಜಡ ವೊಂದೊಂದೆ ಮೂರು ಮೂ |
ರಾಗಿರಲು ಜಡ ಜಡಕೆ ಭೇದ ಸಿದ್ಧ ||

ಭಾಗಾರ ಮಾಡಿ ಗುಣ ರೂಪ ಕ್ರಿಯವ ನೋಡೆ ।
ನಾಗಾರಿ ವಹಗೆ ಜಡಗಳಿಗೆ ಭೇದವೆ ಸತ್ಯ ॥೨೦॥
ಶ್ರೀ ಹರಿಯು (ಧಾಮತ್ರಯಗಳು ನಿತ್ಯ ಮತ್ತು ನರಕ ನಿತ್ಯ)
ಈ ಕಮಲ ಜಾಂಡವು ಅನಿತ್ಯ ವಿದರೊಳಗೆ ಎಂ ।
ದೂ ಕೆಡದ ಸುಖ ಶಾಂತಿ ಯುಕ್ತವಾದ ।
ಶ್ರೀ ಕಳತ್ರನ ತ್ರಿಧಾಮಗಳು ಸುಕಲಿಗೆ ತಕ್ಕ ।
ಶೋಕ ಪೂರಿತವಾದ ನಿತ್ಯನರಕಗಳಿಹವು ॥೨೧॥

ಫಲಸ್ತುತಿ

ಈ ಪಂಚ ಭೇದ ಜ್ಞಾನಿಲ್ಲದವ ಶ್ರೀಮುದ್ರಿ ।
ಗೋಪಿಚಂದನ ಧರಿಸಿದರು ಫಲವೇನು ॥
ಈ ಪ್ರೂಪವಿರೊಳು ವೇಷಧಾರಿಗಳು ಜೀವಿಸರೆ ।
ಆ ಪರಿಯಭಾಸ ವೈಷ್ಣವ ನೆಂದರಿಯಬೇಕು ॥೨೨॥
ಹರಿಗುರುಗಳ ದಯ ಪಡೆದವರಿಗೆ ರುಚಿ ತೋರ್ವದಿತ ।
ರರಿಗೆ ಈ ಕೃತಿಯು ಕರ್ಣ ಕಠೋರವು ॥
ತರಣಿ ಬರೆ ಸರ್ಪರಿಗೆ ಘೋಕಗಾದಂತೆ ಯಿದು ।
ಬರಿಯ ಮಾತಲ್ಲ ಶಾಸ್ತ್ರಕೆ ಸಮ್ಮತ ॥೨೩॥
ಹೀನರೊಳು ಬೆರೆಯದಲೆ ಪಂಚ ಭೇದವ ತಿಳಿದು ।
ಸಾನುರಾಗದಲಿ ಹರಿ ಸರ್ವೋತ್ತಮ ॥
ಪ್ರಾಣದೇವರೆ ಗುರುಗಳೆಂತರಿದು ಭಜಿಸುವರು ।
ಕಾಣರು ಕುಸಂಸಾರ ಧಾಮತ್ರಯ ವೈದುವರು ॥೨೪॥
ಇಪ್ಪತ್ತೈದು ಪದಗಳಿಂದ ಸಂಗತಿಯಾಗಿ ।
ಒಪ್ಪುತಿಹ ಈ ಪಂಚ ಭೇದವನ್ನು ॥
ತಪ್ಪದಲೆನಿತ್ಯಪಠಿಸುವರ ಪೊರವನು ಜೊಮ್ಮ ।
ನಪ್ಪ ಶ್ರೀ ಪ್ರಾಣೇಶ ವಿಠಲ ನಿಹಪರದಲ್ಲಿ ॥೨೫॥

# ಶ್ರೀ ಮನ್ಮಧ್ವಾಚಾರ್ಯ ಕೃತ ಅಥವಾ ಶ್ರೀ ಮಧ್ವಾಚಾರ್ಯಾಣಾಂ ಜೇಷ್ಠ ಭಗಿನ್ಯಾ ತದುಪದೇಶಾನುಸಾರೇಣೋಕ್ತಂ ಪಂಚ ಶ್ಲೋಕೀ ಕೃತೇ ತ್ಯಾಹು

## ಸ್ರಗ್ಧರಾವೃತ್ತ

ವಿಷ್ಣುಃ ಸರ್ವೋತ್ತಮೋಽಥ ಪ್ರಕೃತಿ ರಥವಿಧಿ ಪ್ರಾಣನಾಥೌ ತಥೋಕ್ತೌ । ಬ್ರಹ್ಮಾಣೀ ಭಾರತೀ ಚ ದ್ವಿಜಫಣಿಪಮೃಡಾಶ್ಚ ಸ್ತ್ರಿಯಃ ಷಟ್ಚ ವಿಷ್ಣೋಃ ॥ ಸೌಪರ್ಣೀ ವಾರುಣೀ ಪರ್ವತಪತಿತನಯಾ ಚೇಂದ್ರಕಾಮೌ ತಥೋಽಸ್ಮಾತ್ । ಪ್ರಾಣೋಽಥೋ ಯೋಽನಿರುದ್ಧೋ ರತಿಮನುಗುರವೋ ದಕ್ಷಶಚ್ಯೌ ಚ ಪಾಂತು ॥ ೧ ॥

ತ್ರಿಯಂತಾಂನಃ ಶಚ್ಯೈತೆ ಪ್ರವಹಉತಯಮೋ ಮಾನವೀ ಚಂದ್ರಸೂರ್ಯೌ ಚಾಪ್ಯೋಽಥೊ । ನಾರದೋಽಥೋ ಭೃಗುರನಲ ಕುಲೇಂದ್ರಃ ಪ್ರಸೂತಿಶ್ಚ ನಿತ್ಯಂ ॥ ವಿಶ್ವಾಮಿತ್ರೋ ಮರೀಚಿ ಪ್ರಮುಖವಿಧಿಸುತಾಃ ಸಪ್ತ ವೈವಸ್ವತಾಖ್ಯ-ಶ್ಚೈವಂವೈ ಮಿತ್ರ ತಾರೆ ವರ ನಿಋತಿನಾಮಾ ಪ್ರಾವಹೀ ಚ ಪ್ರಸನ್ನಾಃ ॥ ೨ ॥

ವಿಷ್ವಕ್ಸೇನೋಽಶ್ವಿನೌ ತೌ ಗಣಪತಿ ಧನಪಾವುಕ್ತಶೇಷಾಃ ಶತಸ್ಥಾ ದೇವಾಶ್ಚೋಕ್ತೇತರೇಯೇ ತದವರಮನವಶ್ಚಾವನೇಽಪಥ್ಯಸಂಜ್ಞಾ ವೈನ್ಯೋಽಯಃ ಕಾರ್ತವೀರ್ಯಃ ಕ್ಷಿತಿಪತಿ ಶಶಬಿಂದುಃ ಪ್ರಿಯಾದಿವ್ರತೋಽಥೋ ಗಂಗಾ ಪರ್ಜನ್ಯ ಸಂಜ್ಞೆ ಶಶಿಯಮ ದಯಿತೇ ಮಾ ವಿರಾಟ್ ಚಾಶು ಪಾತು ॥ ೩ ॥

ಏಭ್ಯೋಽನ್ಯೇಽಚಾಗ್ನಿಜಾಯಾಚ . ಜಲಮಯು ಬುಧಶ್ಚಾಪಿ ನಾಮಾತ್ರಿಕೋಽಷಾ । ಚೈವಂಭೂಮೌ ತಥಾತ್ಮಾ ಶನಿರಪಿ ಕಥಿತಃ ಪುಷ್ಕರಃ ಕರ್ಮಪೋಽಪಿ । ಯೇಽಥಾತ್ರಥೋ ಚಾಪ್ಯತಾನಾ ವಿಹಕಥಿತ ಸುರಾ

ಮಧ್ಯಭಾಗೆ ಸಮಾಸ್ತೇ ವಿಷ್ಣ್ವಾದ್ಯಾ ನಃಪುನಂತು ಕ್ರಮಗದಿತ ಮ–
ಹಾ ತಾರತಮ್ಯೇನ ಯುಕ್ತಾಃ ॥ ೪ ॥
ವಂದೇ ವಿಷ್ಣುಂ ನಮಾಮಿ ಶ್ರಿಯಮಥಚ ಭುವಂ ಬ್ರಹ್ಮವಾಯೂಚ
ವಂದೇ । ಗಾಯತ್ರೀ ಭಾರತೀಂ ತಾಮಪಿ ಗರುಡಮನಂತಂ ಭಜೇ
ರುದ್ರದೇವಂ ॥ ದೇವೀರ್ವಂದೇ ಸುಪರ್ಣೀ ಮಹಿಪತಿ ದಯಿತಾಂ ವಾ-
ರುಣೀ ಮಪ್ಯುಮಾಂ ತಾನಿಂದ್ರಾದೀನ್ ಕಾಮಮುಖ್ಯಾನಪಿ ಸಕಲ
ಸುರಾಂಸ್ತದ್ಗುರೂನ್ ಮದ್ಗುರೂಂಶ್ಚ ॥ ೫ ॥

ಶ್ರೀ ಗುರುರಾಜೋ ವಿಜಯತೆ

# ಶ್ರೀ ತಾರತಮ್ಯ ಮಂಗಳಾಷ್ಟಕ

(ಮಂಗಳಪದ)

ಶ್ರೀ ವಿಷ್ಣೋ ರವರಾ ರಮಾ ಖಿಲಗಣೈ ಬ್ರಹ್ಮಾನಿಲೌ ಕೋಟೀಶ ।
ಸ್ತನ್ನ್ಯೂನೌಚ ತದಂಗನೇ ಶತಗುಣ ನ್ಯೂನೇ ತಯೋಶ್ಚಾಧಮಾಃ
ಶೇಷಾದ್ಯಾಸ್ತ ಶತೇನ ಪಂಚಗುಣತೋ ನೀಚಾ ಸ್ತ್ರೀಯಷ್ಷಟ ತತೊ
ಗೌರ್ಯಾದ್ಯಾ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತುನೋ ಮಂಗಳಂ ।೧।
ಸೌಪರ್ಣ್ಯಾದಿ ದಶಾಧಮೋ ಸುರಪತಿಃ ಕಾಮಶ್ಚ ತಾಭ್ಯಾಂ ದಶ ।
ನ್ಯೂನಃ ಪ್ರಾಣ ಉತಾನಿರುದ್ಧ ಮುಖರಾಃ ಷಟ್ಪ್ರಾಗ್ದಶ ನ್ಯೂನಕಾಃ ।
ಷಣ್ಣಾಂ ಪಂಚಗುಣಾಧಮಃ ಪ್ರವಹಕಃ ತಸ್ಮಾದ್ಯಮೋ ಮಾನವೀ ।
ಚಂದ್ರಾರ್ಕೌ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತುನೋಮಂಗಳಂ।೨
ತೇಷಾಂ ಪಾದ ಪದಾರ್ಧ ತಶ್ಚ ವರುಣೋ ಹೀನಸ್ತತೋ ನಾರದೋ ।
ಹೀನಃ ಪಾವಗುಣಾ ತ್ತತೋ ಭೃಗುಮುನಿ ರ್ದಕ್ಷಾಂಗನಾಗ್ನಿಸ್ತ್ರಯಃ ॥

ನೀಚಾಸ್ಸ್ವಲ್ಪಗುಣಾದುಕ್ತ್ಯೈ ತದಣವೋ ಹ್ಯೇವಂ ಸ್ಥಿತೋಽಗಾಧಿಜಃ ।
ಸಪ್ತ ಬ್ರಹ್ಮಜ ತಾಪಸಾಃ ಪ್ರತಿದಿನಂ ಕುರ್ವಂತು ನೋ ಮಂಗಳಂ ॥೩॥
ಪೂರ್ವೋಕ್ತಾನ್ನಪ ಕಾದಪೀಷದಧಮಾ ಗುರ್ವಂಗನಾ ಪ್ರಾವಹಿ ।
ಮಿತ್ರೋ ನಿರಋತಿ ರಸ್ಯಥೋಽಪ್ಯರಿತ ಪಂಚಾಶೀತಿ ದೇವಾಶ್ಚಯೇ ॥
ವಿಷ್ವಕ್ಸೇನ ಗಣೇಶ ವಿತ್ತ ಪತಯ ಸ್ತತ್ಪತ್ನ್ಯ ಏತಾಷ್ಟಯೇ ।
ಮಿತ್ರಾ ತ್ಕಿಂಚಿದಣು ಸ್ವಗಾಃ ಪ್ರತಿದಿನಂ ಕುರ್ವಂತು ನೋ ಮಂಗಳಂ ॥೪॥
ಮುಖ್ಯಪ್ರಾಣ ಉಮಾಪತಿ ಪ್ರಭೃತಯೋ ರುದ್ರಾಶ್ಚ ವಾಚಸ್ಪತಿಃ ।
ಧರ್ಮಶ್ಚೇಂದ್ರ ಹುತಾಶನಾ ವಿತಿ ಪಿತೃ ಸ್ವಗ್ರಾಪ್ರಶ್ಚ ನಶ್ಚಾಶ್ವಿನೌ ॥
ಆದಿತ್ಯಾ ವಸವೋ ಮರುದ್ಭೃಗುಗಣೋ ವಿಶ್ವೇ ಸುರಾಶೋಽಪಸೀ ।
ಏತಾ ವೈ ಶತ ದೇವತಾಃ ಪ್ರತಿದಿನಂ ಕುರ್ವಂತು ನೋ ಮಂಗಳಂ ॥೫॥
ಮುಖ್ಯ ಪ್ರಾಣ ಗುರೂ ಪುತ್ರೌ ಕಥಿತೌ ರುದ್ರೇಷು ಗೌರೀಪತಿಃ ।
ಪ್ರಾಣಸ್ಸ ಪ್ರವಹೋ ಮರುತ್ಸು ಪಿತೃಷು ಧರ್ಮೇಂದು ವಹ್ನಿತ್ರಯಂ ।
ಷಟ್ ಸೂರ್ಯೇಷು ಚ ಪಕ್ಷಮಾಣ ಸಹಿತಾ ವಹ್ನಿರ್ವಸುಷ್ವೇಕಲಃ ।
ಪ್ರಾಗುಕ್ತಾಶ್ಚ ಚತುರ್ದಶ ಪ್ರತಿದಿನಂ ಕುರ್ವಂತು ನೋ ಮಂಗಳಂ ॥೬॥
ವಹ್ನೇರಾದಿಜ ಉಕ್ತಶೇಷ ಮನವಸ್ತ್ವೇಚಿಧ್ಯ ಮುಖ್ಯರ್ಷಯಃ ।
ಪೃಥ್ವ್ಯಾದ್ಯಾ ಅಪಿ ಕರ್ಮಜಾ ಅಪಿ ಬಲಿರ್ಹ್ಯರ್ಷ್ಯಾಚ ಗಂಧರ್ವವಾ ॥
ಪಿತೃಗ್ರಾಪ್ರ ಅಪಿ ಪತ್ತಶೇಷ ಶತಕಾ ದಲ್ಪಾಧವಃ ಪಾವಕಾ ।
ದ್ಗಂಗಾದ್ಯಾಶ್ಚ ಷಡಲ್ಪತಃ ಪ್ರತಿದಿನಂ ಕುರ್ವಂತು ನೋ ಮಂಗಳಂ ॥೭॥
ಪರ್ಜನ್ಯಾ ದಣವಶ್ಚ ಕೇಚಿದಮರಾ ಸ್ತೇಷ್ವಗ್ನಿ ಜಾಯಾಧಮಾ ।
ತಸ್ಮಾ ಅಪ್ಯವರೋ ಬುಧ ಸ್ತತ ಉಷಾ ಸ್ಸೇಚೋಷ ತಸ್ಸೂರ್ಯಜಃ ।
ಪ್ರಹ್ಲಾದೋ ಪೃಥಕರ್ಮಪೋಽಪಿ ಚ ಮ ಸ್ಯಾಚ್ಚಾನ ಪಿತ್ರಾಪ್ಸಯಾ ।
ಗಂಧರ್ವಾ ದ್ವಿವಿಧಾ ನೃಪಾಸ್ತ್ವಪರಾಃ ಕ॥ ಸಂ॥ ೩ ೮
ಮರ್ತ್ಯೇಷ್ವಪಿ ಸು ತಾರತಮ್ಯ ಸಹಿತಾ ವರ್ಣಾಶ್ರಮಾ ಚಾರಗಾ ।
ಸ್ತನ್ನೀಚಾ ಅಥ ವರ್ಣ ಬಾಹ್ಯ ಸುಜನಾ ಸ್ತೇಭ್ಯೋ ಧಮಾಃ ಪಂಚಮಾಃ ।

ತನ್ನೀಚಾಃ ಪಶವೋಥ ಪಕ್ಷಿಣ ಅಥೋ ನೀಚಾಶ್ಚ ಕೀಟಾದಯ |
ಸ್ತನ್ನೀಚಾ ಗಿರಿ ವೃಕ್ಷ ಗುಲ್ಮ ಲತಿಕಾಃ ಕಃ|| ಮಂಗಳಂ ||
ಸಂಸಾರ ಭ್ರಮ ಮಧ್ಯವಾಸ್ತ್ಯಣಗಣಾ ನೀಚಾ ಅಪಿಮೋಚಕ್ರಮಾ |
ತ್ಸಸ್ವ ಭರ್ತಾ ರಾಧನ ಸಾಧನ ಪ್ರಚುರಕಾ ನೀಚಾಸ್ತಮೋಚೇತನಾಃ|
ಮಿಥ್ಯಾಜ್ಞಾನಿ ಜನಾಸ್ತತೋಪಿ ಚರಮಾ ದುಸ್ತತ್ತ್ವ ಮಾನಾಸ್ತತೋ |
ಕಿರ್ಮಾರಾದಥ ವಿಪ್ರಚಿತ್ತಿ ರಥಮು ಸ್ತಸ್ಮಾ ದಲಕ್ಷ್ಮೀ ಕಲಿಃ ||೧೦||
ಇತ್ಥಂ ಶ್ರೀನಿಧಿ ಪೂರ್ವಕಾಽಖಿಲ ಜಗಚ್ಛ್ರೀತಾರತಮ್ಯಸ್ತುತಿಂ |
ಶ್ರೀಮದ್ವೇಂಕಟ ಪತ್ಯುದಾರ ವಿದುಷಾಂ ಶಿಷ್ಯೋವದದ್ಭಕ್ತಿತಃ |
ತಚ್ಚಾಲೋಪಿಚ ಕುಟ್ವಿ ಮುದ್ದುರಮುಕೋ ಮಧ್ವೇಶ ಸಂಪ್ರೀತಯೇ |
ಯೇ ಶೃಣ್ವಂತಿ ಪಠಂತಿ ದಾಸ್ಯತಿ ಶುಭಂ ತೇಷಾಂ ಜಗತ್ಯಧಿಪೋಹರಿಃ ||೧೧

ಇತಿ ತಾರತಮ್ಯ ಸ್ತುತಿ ಸಮಾಪ್ತ

ಮಂಗಳಂ ಜಯ ಮಂಗಳಂ |
ಜಯ ಮಂಗಳ ಭುವನೇಂದ್ರ ಪೂಜ್ಯ ಪಾದಾಬ್ಜ
ಪಿಂಗಳ ಭಾಂಗ ಸುಗಸಂಗನ್ನವಾದಿ ಭಜಂಗ ವಿಹಂಗ
ಉತ್ತುಂಗ ನಿಸ್ಸಂಗ || ೧ ||
ದಾತ ವಿಖ್ಯಾತ ವಿಧಾತಾಂಶ ಸದ್ಗುಣ
ವ್ರಾತಳೇಂದ್ರ ಕರ ಜಾತ ಸುನಾಥಾ || ೨ ||
ಪ್ರಾಣೇಶ ವಿಠಲನ ಪ್ರಾಣ ಪ್ರವೀಣ ಸು!
ಪ್ರಾಣ ಪತಾಬ್ಧಿ ಪಾಠೀಣ ಕಲ್ಯಾಣ || ೩ ||

ಶ್ರೀ ಗುರು ಮಧ್ವೇಶಾರ್ಪಣಮಸ್ತು

